(1) **ಆಡಳಿತ ಶಾಖೆ:-** ಕಾರ್ಯಪಾಲಕ ಇಂಜಿನೀಯರ್, ಸಣ್ಣ ನೀರಾವರಿ ವಿಭಾಗ, ಗುಲ್ಬರ್ಗಾ ಕಛೇರಿಯಲ್ಲಿ ಮಂಜೂರಾಗಿರುವ 35 ಹುದ್ದೆಗಳ ಪೈಕಿ ಎಲ್ಲಾ ಅಧಿಕಾರಿ ಸಿಬ್ಬಂದಿಯವರು ಕಾರ್ಯನಿರ್ವಹಿಸುತ್ತಿರುತ್ತಾರೆ. ಈ ಸಂಖ್ಯೆಗಳ ಪೈಕಿ ಹಾಲಿ ಕಾರ್ಯನಿರ್ವಹಿಸುತ್ತಿರುವ ವರ್ಗ 'ಎ' 1 ನೌಕರರು, ವರ್ಗ 'ಬಿ' 5, ವರ್ಗ 'ಸಿ' 24 ಮತ್ತು ವರ್ಗ 'ಡಿ' 5 ಸಂಖ್ಯೆಗಳಾಗಿರುತ್ತವೆ.

ಅಧೀಕ್ಷಕರು ಆಡಳಿತ ಶಾಖೆ ಮುಖ್ಯಸ್ಥರಾಗಿದ್ದು, ಆಡಳಿತಕ್ಕೆ ಸಂಬಂಧಪಟ್ಟಂತೆ ನೌಕರರ ಸೇವಾ ವಿವರಗಳು ಭವಿಷ್ಯ ನಿಧಿಗಳ ದಾಖಲೆಗಳನ್ನು ನಿರ್ವಹಿಸುವುದು, ವಿಚಾರಣೆ, ವಿದ್ಯುತ್‌ಚ್ಛಕ್ತಿ ಮತ್ತು ದೂರವಾಣಿ ಬಿಲ್ಲುಗಳನ್ನು ಪಾವತಿಸುವುದು, ದಾಖಲೆಗಳನ್ನು ಸಂಗ್ರಹಿಸಿ ಕಾಪಾಡುವುದು.

ನಿರ್ವಹಿಸುವ ಸಂಕ್ಷಿಪ್ತ ಕೆಲಸದ ವಿವರವನ್ನು ಈ ಕೆಳಗೆ ನೀಡಲಾಗಿದೆ.

1) ಆಡಳಿತ ಶಾಖೆಯ ಆಡಳಿತಕ್ಕೆ ಸಂಬಂಧಪಟ್ಟಂತೆ ನೌಕರರ ಸೇವಾವಿವರಗಳು, ವಿದ್ಯುತ್‌ಚ್ಛಕ್ತಿ ಮತ್ತು ದೂರವಾಣಿ ಸಂಬಂಧಿಸಿದ ಸಾದಿಲ್ವಾರು ಬಿಲ್ಲುಗಳನ್ನು ತಯಾರಿಸಿ ಪಾವತಿಸುವುದು.
2) ನಗದು ಮತ್ತು ಸ್ವೀಕೃತಿ ಮತ್ತು ರವಾನೆ ಶಾಖೆಯು ದಾಖಲೆಗಳನ್ನು ನಿರ್ವಹಿಸುವುದು. ಸೇವಾ ಅಂಚೆ ಚೀಟಿಗಳ ದಾಖಲೆ ನಿರ್ವಹಣೆ ದೈನಂದಿನ ಪತ್ರಗಳನ್ನು ರವಾನಿಸುವುದು ಹಾಗೂ ಸ್ವೀಕರಿಸುವುದು ಇತ್ಯಾದಿ ಕೆಲಸಗಳನ್ನು ನಿರ್ವಹಿಸುತ್ತದೆ.
3) ನೌಕರರ ಶಿಸ್ತು ಪ್ರಕರಣ ಮತ್ತು ಅವ್ಯವಹಾರದ ಬಗ್ಗೆ ಮುಂದಿನ ಕ್ರಮಕ್ಕಾಗಿ ಅಧೀಕ್ಷಕ ಅಭಿಯಂತರವರಿಗೆ ವರದಿ ಸಲ್ಲಿಸುವುದು ಇತ್ಯಾದಿ ಕೆಲಸವನ್ನು ನಿರ್ವಹಿಸುತ್ತದೆ.

(2) **ಲೆಕ್ಕ ಶಾಖೆ:-** ಸಣ್ಣ ನೀರಾವರಿ ವಿಷಯಕ್ಕೆ ಸಂಬಂಧಿಸಿದಂತೆ ಲೆಕ್ಕ ಪತ್ರ ಕಾಮಗಾರಿಗಳ ನಗದು ಪುಸ್ತಕಗಳ ನಿರ್ವಹಣೆ, ಲೆಕ್ಕ ಪತ್ರ ಕ್ರೋಢೀಕರಣ, ಮಹಾಲೇಖಪಾಲರ ಆಡಿಟ್ ಪ್ಯಾರ, ಎಂ.ಎಂ.ಆರ್.ಆಯವ್ಯಯ ತಯಾರಿಕೆ ಅನುದಾನ ಮರುಪಾವತಿ, ಕಾಮಗಾರಿಗಳ ಟೆಂಡರ್ ಪ್ರಕ್ರಿಯೆಗಳ ಪರಿಶೀಲನೆ, ಅಂದಾಜು ಪರಿಶೀಲನೆ, ಬಿಲ್ಲುಗಳ ತನಿಖೆ, ಹಣ ಸಂದಾಯ ಇದೇ ಮುಂತಾದ ಕಾರ್ಯಗಳನ್ನು ನಿರ್ವಹಿಸುತ್ತಾರೆ.

(3) **ಉಗ್ರಾಣ ಶಾಖೆ:-** ಉಗ್ರಾಣ ಶಾಖೆಯ ಕಾರ್ಯಭಾರವನ್ನು ದ್ವಿತೀಯ ದರ್ಜೆ ಉಗ್ರಾಣ ಸಹಾಯಕರು ನೋಡಿಕೊಳ್ಳುತ್ತಿದ್ದಾರೆ. ಈಗ ಸರ್ಕಾರದವತಿಯಿಂದ ಕಾಮಗಾರಿಗಾಗಿ ಯಾವುದೇ ಸಾಮಗ್ರಿಗಳನ್ನು ಖರೀದಿಸುತ್ತಿಲ್ಲವಾದ್ದರಿಂದ ಈ ಶಾಖೆಗೆ ಹೆಚ್ಚು ಮಹತ್ವ ಇರುವುದಿಲ್ಲ. ಆದಾಗ್ಯೂ ತುರ್ತುಪರಿಸ್ಥಿತಿಯಲ್ಲಿ ಏನಾದರೂ ಸಾಮಗ್ರಿಗಳನ್ನು ಸಲ್ಲಿಸಬೇಕಾದಲ್ಲಿ ಪಾರದರ್ಶಕದ ನಿಯಮದಂತೆ ಸಾಮಗ್ರಿಗಳನ್ನು ಖರೀದಿಸಲು ಈ ಶಾಖೆಯಿಂದ ಕ್ರಮ ಕೈಗೊಳ್ಳಲಾಗುತ್ತದೆ. ಅಲ್ಲದೇ ಹಾಲಿ ಇರುವ ಸಾಮಗ್ರಿಗಳ ವಹಿ ಇತ್ಯಾದಿಗಳನ್ನು ಈ ಶಾಖೆಯಲ್ಲಿ ನಿರ್ವಹಿಸಲಾಗುತ್ತದೆ. ಅಲ್ಲದೇ ಯಂತ್ರೋಪಕರಣಗಳ ನಿರ್ವಹಣೆ ಮತ್ತು ನಿಯತಕಾಲಿಕ ವರದಿಗಳನ್ನು ಸಲ್ಲಿಸುವ ಜವಾಬ್ದಾರಿಯು ಈ ಶಾಖೆಗೆ ಸಂಬಂಧಿಸಿರುತ್ತದೆ.

(4) **ತಾಂತ್ರಿಕ ಶಾಖೆ:-** ಕಾರ್ಯಪಾಲಕ ಅಭಿಯಂತರರು ಇವರು ಈ ವಿಭಾಗ ಕಾರ್ಯಾಲಯದ ತಾಂತ್ರಿಕ ವಿಷಯಗಳಿಗೆ ಸಂಬಂಧಪಟ್ಟ ಎಲ್ಲಾ ಕಾರ್ಯಗಳ ಕಾರ್ಯಭಾರವನ್ನು ಹೊಂದಿದ್ದು ಇವರಿಗೆ ಸಹಾಯಕ್ಕಾಗಿ ಸಹಾಯಕ ಕಾರ್ಯಪಾಲಕ ಇಂಜಿನೀಯರ್ ಶ್ರೇಣಿಯ ಒಬ್ಬರು ತಾಂತ್ರಿಕ ಸಹಾಯಕರಿರುತ್ತಾರೆ. ಈ ತಾಂತ್ರಿಕ ಸಹಾಯಕರ ಕಾರ್ಯ ವ್ಯಾಪ್ತಿ ಈ ಕೆಳಗಿನಂತಿರುತ್ತದೆ.

1) ಉದ್ದೇಶಿಸಿರುವ ಸಣ್ಣ ನೀರಾವರಿ ಕಾಮಗಾರಿಗಳನ್ನು ತಾಂತ್ರಿಕವಾಗಿ ಪರಿಶೀಲಿಸುವುದು.
2) ಅಂದಾಜು ಪಟ್ಟಿ ಹಾಗೂ ವಿನ್ಯಾಸಗಳನ್ನು ಮತ್ತು ಕರಡು ಟೆಂಡರ್ ಪತ್ರಿಕೆಗಳನ್ನು ಅಂತಿಮಗೊಳಿಸುವುದು.
3) ರೂ.4.00 ಲಕ್ಷದ ವರೆಗಿನ ಆಡಳಿತಾತ್ಮಕ ಅನುಮೋದನೆ ಹೊಂದಿರುವ ಅಂದಾಜು ಪಟ್ಟಿಗಳಿಗೆ ತಾಂತ್ರಿಕ ಮಂಜೂರಾತಿ ನೀಡುವುದು.
4) ರೂ.4.00 ಲಕ್ಷದ ಮೇಲ್ಪಟ್ಟು ಅಂದಾಜು ಪಟ್ಟಿ, ಮಾಸ್ ಹಾಗೂ ಕರಡು ಟೆಂಡರ್ ಪತ್ರಿಕೆಗಳನ್ನು ಮೇಲಾಧಿಕಾರಿಗಳಿಗೆ ಸಲ್ಲಿಸುವುದು ಹಾಗೂ ಅನುಮೋದನೆ ಪಡೆಯುವುದು.
5) ಯೋಜನೆಗಳ ಪ್ರಗತಿಯ ಕುರಿತು ಪರಿಶೀಲಿಸುವುದು ಹಾಗೂ ವರದಿ ಪಡೆಯುವುದು (ಇವುಗಳಲ್ಲಿ ಆಯವ್ಯಯ ಅನುಬಂಧ ಇ ನಬಾರ್ಡ್ ರೈತಕಾರ್ಯ ಕೆರೆ, 11ನೇ ಹಣಕಾಸು ಆಯೋಗ, ಆರ್.ಎಸ್.ವಿ.ವೈ., ಹೆಚ್.ಕೆ.ಡಿ.ಬಿ. ರಾಷ್ಟ್ರೀಯ ಯೋಜನೆಯಾಗಿರುವ ಕೆರೆಗಳ ಅಭಿವೃದ್ಧಿ ಪಡಿಸುವ ಕಾಮಗಾರಿಗಳು ಒಳಗೊಂಡಿವೆ)
6) ಎಂ.ಎಂ.ಆರ್. ಮತ್ತು ಕೆ.ಡಿ.ಪಿ. ಸಭೆಗಳಿಗೆ ಪ್ರಗತಿಯ ವರದಿ ತಯಾರಿಸುವುದು ಹಾಗೂ ಹಾಜರಾಗುವುದು.
7) ವಾರ್ಷಿಕ ಮತ್ತು ಪಂಚವಾರ್ಷಿಕ ಯೋಜನೆಗಳನ್ನು ತಯಾರಿಸುವುದು.
8) ವಿಧಾನಸಭಾ ಮತ್ತು ವಿಧಾನ ಪರಿಷತ್ ಪ್ರಶ್ನೆಗಳಿಗೆ ಉತ್ತರಿಸುವುದು.
9) ಅಂದಾಜು ಸಮಿತಿ ಸಭೆ ಮತ್ತು ಭರವಸೆ ಸಮಿತಿ ಸಭೆಗಳಿಗೆ ವರದಿ ತಯಾರಿಸುವುದು ಹಾಗೂ ಸಮಿತಿಗೆ ಹಾಜರಾಗುವುದು.

**ಕೈಪಿಡಿ-2 ಸಂಸ್ಥೆಯ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದ ಅಧಿಕಾರ ಮತ್ತು ವಿಧಿಗಳ ವಿವರ.**

ಕಾರ್ಯನಿರ್ವಾಹಕ ಅಭಿಯಂತರರು, ಕಾರ್ಯಭಾರ ಈ ಕೆಳಗಿನಂತಿದೆ.

1) ಕಾಮಗಾರಿಗಳ ಅಂದಾಜು ಮೊತ್ತ ರೂ.2.00 ಲಕ್ಷದ ವರೆಗಿನ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆ ನೀಡಿ, ತಾಂತ್ರಿಕ ಮಂಜೂರಾತಿ ನೀಡುವ ಅಧಿಕಾರ ಇರುತ್ತದೆ.
2) ಅಂದಾಜು ಮೊತ್ತ ರೂ.2.00 ಲಕ್ಷದ ವರೆಗಿನ ಕಾಮಗಾರಿಯ ಕರಡು ಗುತ್ತಿಗೆ ಅನುಮೋದನೆ ನೀಡುವ ಅಧಿಕಾರ ಇರುತ್ತದೆ.
3) ಕಾರ್ಯಕಾರಿಗಳ ಟೆಂಡರ್‌ಗಳನ್ನು ಕರೆಯುವುದು.
4) ಎಂ.ಎಂ.ಆರ್. ಸಭೆ ನಡೆಸಿ ಕಾಮಗಾರಿಗಳ ಆರ್ಥಿಕ ಮತ್ತು ಭೌತಿಕ ಪ್ರಗತಿ ಪರಿಶೀಲನೆ ಮಾಡುವುದು.
5) ವಿಧಾನಸಭೆ ಮತ್ತು ವಿಧಾನ ಪರಿಷತ್ ನಡುವಳಿಯಲ್ಲಿ ಪ್ರಶ್ನೆಗಳಿಗೆ ಉತ್ತರವನ್ನು ತಯಾರಿಸಿ ಮೇಲಾಧಿಕಾರಿಗಳಿಗೆ ಸಲ್ಲಿಸುವುದು.
6) ಅಧೀನ ಕಛೇರಿಗಳ ಆಡಳಿತಾತ್ಮಕ ಪರಿವೀಕ್ಷಣೆ ನಡೆಸುವುದು.
7) ಮಹಾಲೇಖಾ ಪಾಲಕರ ತಪಾಸಣೆ ವರದಿಗಳಿಗೆ ಉತ್ತರ ನೀಡುವುದು.
8) ಸರ್ಕಾರದ ನಿಗದಿತ ಸಭೆಗಳಿಗೆ ಹಾಜರಾಗುವುದು ಹಾಗೂ ಚರ್ಚಿಸಿದ ಅಂಶಗಳ ಬಗ್ಗೆ ಸೂಕ್ತ ಕ್ರಮ ತೆಗೆದುಕೊಳ್ಳುವುದು.
9) ದೈನಂದಿನ ಆಡಳಿತವನ್ನು ನಡೆಸುವುದು.
10) ಪ್ರಗತಿಯಲ್ಲಿರುವ ಕಾಮಗಾರಿಗಳ ಪ್ರಗತಿಯನ್ನು ಹಾಗೂ ಗುಣಮಟ್ಟವನ್ನು ತಪಾಸಣೆ ಮಾಡುವುದು.

11) ವಿಭಾಗ ಕಛೇರಿಯಲ್ಲಿರುವ ಮಾಹಿತಿಯನ್ನು ಮಾಹಿತಿ ಪಡೆಯುವ ಹಕ್ಕಿನ ನಿಯಮ ಪ್ರಕಾರ ಕೋರಿಕೆ ಬಂದಲ್ಲಿ ಸಾರ್ವಜನಿಕರಿಗೆ ನೀಡುವುದು.

12) ಕಛೇರಿಯ ಉಳಿದ ಅಧಿಕಾರಿಗಳ ಮತ್ತು ಸಿಬ್ಬಂದಿಗಳಿಗೆ ಪ್ರತ್ಯೇಕವಾಗಿ ಸ್ವತಂತ್ರ ಅಧಿಕಾರವನ್ನು ನೀಡಿರುವುದಿಲ್ಲ. ಕಾರಣ ಅಧಿಕಾರಿಗಳು ಮತ್ತು ಸಿಬ್ಬಂದಿಗಳು ಕಾರ್ಯನಿರ್ವಾಹಕ ಅಭಿಯಂತರರಿಗೆ ಕರ್ತವ್ಯ ನಿಭಾಯಿಸಲು ಸಹಾಯ ಮಾಡುವುದು ಹಾಗೂ ಸಹಕರಿಸುವುದು.

**ಕೈಪಿಡಿ-3:-** ನಿರ್ಣಯ ತೆಗೆದುಕೊಳ್ಳುವಲ್ಲಿ ಪಾಲಿಸಬೇಕಾದ ವಿಧಿವಿಧಾನಗಳ ಮತ್ತು ಪರಿವೀಕ್ಷಣೆ ಮತ್ತು ಜವಾಬ್ದಾರಿ ವಿವರಗಳು.

ಇಲಾಖೆಯ ಕಾಮಗಾರಿಗೆ ಸಂಬಂಧಪಟ್ಟ ಕಾರ್ಯನಿರ್ವಹಿಸುವಲ್ಲಿ

1) ಲೋಕೋಪಯೋಗಿ ಇಲಾಖೆಯ ಸಂಹಿತೆ ಭಾಗ-1 ಮತ್ತು ಭಾಗ-2
2) ಕರ್ನಾಟಕ ಪಾರದರ್ಶಕ ನಿಯಮ 2000
3) ಲೋಕೋಪಯೋಗಿ ಲೆಕ್ಕ ಸಂಹಿತೆ ಭಾಗ-1 ಮತ್ತು ಭಾಗ-2ನ್ನು ಅನುಸರಿಸಲಾಗುವುದು.
4) ಭೂಸ್ವಾಧೀನ ಕಾಯ್ದೆ.
5) ಉಗ್ರಾಣ ಕೈಪಿಡಿ
6) ಮಧ್ಯಸ್ಥಿಕೆ ಕಾಯ್ದೆಗಳನ್ನು ಅನುಸರಿಸಲಾಗುತ್ತಿದೆ.

ನೀರಾವರಿ ಕಾಮಗಾರಿಗಳ ನಿರ್ವಹಣೆಯಲ್ಲಿ

1) ಕರ್ನಾಟಕ ನೀರಾವರಿ ಕಾಯ್ದೆ
2) ಕರ್ನಾಟಕ ನೀರಾವರಿ (ನೀರಿನ ಕರ ವಿಧಿಸುವುದು) ನಿಯಮ 1965
3) ನೀರಾವರಿ ಕೈಪಿಡಿ 1974.

ಇವುಗಳನ್ನು ಅನುಸರಿಸಲಾಗುತ್ತಿದೆ.

ಈ ಇಲಾಖೆಯಲ್ಲಿ ನಿರ್ವಹಿಸಲ್ಪಡುವ ಬಿಲ್ಲು ಕಾಮಗಾರಿಗಳನ್ನು ಕರ್ನಾಟಕ ಪಾರದರ್ಶಕ ನಿಯಮದ ಅನುಸಾರ ಟೆಂಡರ್ ಕರೆದು ಗುತ್ತಿಗೆದಾರರಿಗೆ ನೀಡಲಾಗುತ್ತಿದೆ. ಗುತ್ತಿಗೆದಾರರನ್ನು ನಿಗದಿಪಡಿಸಿದ ನಂತರ ಅವರಿಗೆ ಕಾರ್ಯಾದೇಶ ನೀಡಲಾಗುತ್ತಿದೆ. ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು ಗುತ್ತಿಗೆದಾರರಿಗೆ ನಿವೇಶನವನ್ನು ಹಸ್ತಾಂತರಿಸಿ ಕೆಲಸವನ್ನು ಅನುಷ್ಠಾನಗೊಳಿಸಲು ಮಾರ್ಕ್‌ಔಟ್ ನೀಡಿ ಕೆಲಸ ಚಾಲನೆ ಮಾಡುತ್ತಾರೆ. ಸಂಬಂಧಿಸಿದ ಸಹಾಯಕ/ಕಿರಿಯ ಅಭಿಯಂತರರು, ದೈನಂದಿನ ನಿವೇಶನಕ್ಕೆ ಹೋಗಿ ಕೆಲಸದ ಉಸ್ತುವಾರಿಯನ್ನು ನೋಡಿಕೊಳ್ಳುತ್ತಾರೆ. ಸಹಾಯಕ ಕಾರ್ಯನಿರ್ವಾಹಕ ಅಭಿಯಂತರು ಆಗಿಂದಾಗ್ಗೆ ನಿವೇಶನಕ್ಕೆ ಭೇಟಿ ನೀಡಿ ಕೆಲಸವನ್ನು ಪರಿವೀಕ್ಷಿಸುತ್ತಾರೆ. ಹಾಗೆಯೇ ಕಾರ್ಯನಿರ್ವಾಹಕ ಅಭಿಯಂತರು ನಿವೇಶನಕ್ಕೆ ಭೇಟಿ ನೀಡಿ ಸಲಹೆ ಸೂಚನೆ ನೀಡುತ್ತಾರೆ. ಪ್ರಗತಿಯನ್ನು ಪರಿಶೀಲಿಸಲು ಅಧೀಕ್ಷಕ ಅಭಿಯಂತರರು ಮತ್ತು ಮುಖ್ಯ ಅಭಿಯಂತರರ ಮಟ್ಟದಲ್ಲಿ ಸಭೆ ನಡೆಸಲಾಗುತ್ತಿದೆ.

ಸಾರ್ವಜನಿಕರಿಗೆ ಬಳಕೆಗೆ ವಾಚನಾಲಯ ಲಭ್ಯವಿರುವುದಿಲ್ಲ.

**ಕೈಪಿಡಿ-16:-** ಇಲಾಖೆಯಲ್ಲಿರುವ ಸಾರ್ವಜನಿಕ ಮಾಹಿತಿ ಅಧಿಕಾರಿಗಳ ಹೆಸರು, ಪದನಾಮ ಮತ್ತು ಇತರ ವಿವರಗಳು.

ಸಾರ್ವಜನಿಕ ಮಾಹಿತಿ ಅಧಿಕಾರಿಗಳ ಹೆಸರು ಮತ್ತು ಪದನಾಮ:

ಸಾರ್ವಜನಿಕರು ಕಾರ್ಯಪಾಲಕ ಇಂಜಿನೀಯರ್, ಸಣ್ಣ ನೀರಾವರಿ ವಿಭಾಗ, ಗುಲ್ಬರ್ಗಾ ಇವರ ವ್ಯಾಪ್ತಿಯಲ್ಲಿ ಲಭ್ಯವಿರುವ ಸವಲತ್ತುಗಳನ್ನು ಪಡೆಯಲು ಶ್ರೀ ಸಲಗಾರ ಬಸವರಾಜ ತಾಂತ್ರಿಕ ಸಹಾಯಕರು ಇವರಿಗೆ ಅರ್ಜಿ ನೀಡುವುದು ಅಥವಾ ಸಂಪರ್ಕಿಸುವುದು.

**ಕೈಪಿಡಿ-17:-** ಇತರೆ ವಿವರಗಳು.

ಪಿ.ಆರ್. 590 ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಗುಲ್ಬರ್ಗಾ.

## ಪ್ರಾಚಾರ್ಯರು, ಪರೀಕ್ಷಾ ಪೂರ್ವ ತರಬೇತಿ ಕೇಂದ್ರ,
## ಡಾ.ಬಿ.ಆರ್. ಅಂಬೇಡ್ಕರ್ ಭವನ, ವಸಂತ ನಗರ, ಮಿಲ್ಲರ್ಸ್ ರಸ್ತೆ, ಬೆಂಗಳೂರು
### ಅಧಿಸೂಚನೆ ಸಂಖ್ಯೆ: ಪಪೂತಕೇ:ಸಾ.ಕುಂ.ಕೊ:ಸಿಆರ್-42:2005-06, ದಿನಾಂಕ: 16ನೇ ಫೆಬ್ರವರಿ 2006

**ವಿಷಯ :** ಭಾರತ ಸರ್ಕಾರದ ಮಾಹಿತಿ ಹಕ್ಕು ಅಧಿನಿಯಮ 2005ರ ಅನುಷ್ಠಾನದ ಬಗ್ಗೆ.

ಭಾರತ ಸರ್ಕಾರವು ಜಾರಿಗೆ ತಂದಿರುವ 2005ರ ಮಾಹಿತಿ ಹಕ್ಕು ಕಾಯ್ದೆಯನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸುವ ಸಂಬಂಧ ಅಧಿನಿಯಮ 2005ರ (Central Act 22 of 2005) ಸೆಕ್ಷನ್ 5(1) 5(2) ಮತ್ತು 19(1) ರಲ್ಲಿ ಪ್ರದತ್ತವಾದ ಅಧಿಕಾರ ಪ್ರಕಾರ ಸಮಾಜ ಕಲ್ಯಾಣ ಇಲಾಖೆಯ ಪರೀಕ್ಷಾ ಪೂರ್ವ ತರಬೇತಿ ಕೇಂದ್ರ, ಡಾ:ಬಿ.ಆರ್. ಅಂಬೇಡ್ಕರ್ ಭವನ, ಮಿಲ್ಲರ್ಸ್ ರಸ್ತೆ, ವಸಂತ ನಗರ, ಬೆಂಗಳೂರು-52, ಈ ಕಛೇರಿಯ ಮಾಹಿತಿಯನ್ನು ಕೋರುವ ವ್ಯಕ್ತಿಗಳಿಗೆ ಅಂತಹ ಮಾಹಿತಿಯನ್ನು ಮೇಲಿನ ಕಾಯ್ದೆ ಅನ್ವಯ ಒದಗಿಸಲು ಮಾಹಿತಿ ಕೋರುವ ಅರ್ಜಿಗಳು ಅಥವಾ ಮೇಲ್ಮನವಿಗಳನ್ನು ಸ್ವೀಕರಿಸಲು ಕ್ರಮವಾಗಿ ಸಾರ್ವಜನಿಕ ಮಾಹಿತಿ ಅಧಿಕಾರಿ ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ ಹಾಗೂ ಮೇಲ್ಮನವಿ ಪ್ರಾಧಿಕಾರಗಳನ್ನಾಗಿ ಈ ಕೆಳಕಂಡಂತೆ ರಾಜ್ಯಮಟ್ಟದಲ್ಲಿ ನೇಮಿಸಲಾಗಿದೆ.

| ಕ್ರಮ ಸಂಖ್ಯೆ | ಇಲಾಖೆ ಹೆಸರು | ಕಾಯ್ದೆ 2005ರ ಸೆಕ್ಷನ್ 5(1)ರ ಪ್ರಕಾರ ಸಾರ್ವಜನಿಕ ಮಾಹಿತಿ ಅಧಿಕಾರಿ | ಕಾಯ್ದೆ 2005ರ ಸೆಕ್ಷನ್ 5(2)ರ ಪ್ರಕಾರ ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ | ಕಾಯ್ದೆ 2005ರ ಸೆಕ್ಷನ್ 19(1)ರ ಪ್ರಕಾರ ಮೇಲ್ಮನವಿ ಪ್ರಾಧಿಕಾರ |
|---|---|---|---|---|
| 1) | ಸಮಾಜ ಕಲ್ಯಾಣ ಇಲಾಖೆ. | ಪ್ರಾಚಾರ್ಯರು ಪರೀಕ್ಷಾ ಪೂರ್ವ ತರಬೇತಿ ಕೇಂದ್ರ, ಬೆಂಗಳೂರು. | ಕಛೇರಿ ಅಧೀಕ್ಷಕರು ಪರೀಕ್ಷಾ ಪೂರ್ವ ತರಬೇತಿ ಕೇಂದ್ರ, ಬೆಂಗಳೂರು | ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ, ಬೆಂಗಳೂರು. |

### ಪರೀಕ್ಷಾ ಪೂರ್ವ ತರಬೇತಿ ಕೇಂದ್ರದ ಕಾರ್ಯಕಲಾಪ ವಿವರ

ಕರ್ನಾಟಕ ಸರ್ಕಾರದ ಸಮಾಜ ಕಲ್ಯಾಣ ಇಲಾಖೆಯ ಅಧೀನದಲ್ಲಿ ಪರೀಕ್ಷಾ ಪೂರ್ವ ತರಬೇತಿ ಕೇಂದ್ರವು ಡಾ: ಬಿ.ಆರ್. ಅಂಬೇಡ್ಕರ್ ಭವನ, ಮಿಲ್ಲರ್ಸ್ ರಸ್ತೆ, ವಸಂತ ನಗರ, ಬೆಂಗಳೂರು-52 ಇಲ್ಲಿ ಅಸ್ತಿತ್ವದಲ್ಲಿರುತ್ತದೆ. ರಾಜ್ಯದಲ್ಲಿ ಸರ್ಕಾರದ ವತಿಯಿಂದ ಈ ಒಂದೇ ಕೇಂದ್ರವು ಸಮಾಜ

ಕಲ್ಯಾಣ ಇಲಾಖೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದು, 1990 ರಿಂದ ಅಖಿಲ ಭಾರತ ನಾಗರೀಕ ಸೇವಾ ಪರೀಕ್ಷೆಗಳು ಮತ್ತು ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ನಡೆಸುವ ಎಲ್ಲಾ ವಿಧವಾದ ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ಸ್ಪರ್ಧಿಸುವ ಪರಿಶಿಷ್ಟ ಜಾತಿ/ಪರಿಶಿಷ್ಟ ವರ್ಗ/ಹಿಂದುಳಿದ ವರ್ಗ ಹಾಗೂ ಅಲ್ಪಸಂಖ್ಯಾತ ಅಭ್ಯರ್ಥಿಗಳಿಗೆ ತರಬೇತಿಯನ್ನು ನೀಡಲಾಗುತ್ತಿದೆ, ಪ್ರಾಮುಖ್ಯವಾಗಿ ಅಭ್ಯರ್ಥಿಗಳಿಗೆ ಅಖಿಲ ಭಾರತ ನಾಗರೀಕ ಪರೀಕ್ಷೆಗಳಿಗೆ ಹಾಗೂ ಇತರೆ ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ಸ್ಪರ್ಧಿಸಲು ತಳಹದಿಯಿಂದ ತರಬೇತಿ ನೀಡುವುದು ಹಾಗೂ ಪೂರ್ವಭಾವಿ ಮತ್ತು ಮುಖ್ಯ ಪರೀಕ್ಷೆಗಳಿಗೆ ಉತ್ತಮ ಮಟ್ಟದ ಉಪನ್ಯಾಸಕರಿಂದ ತರಬೇತಿ ನೀಡುವುದು. ಅಭ್ಯರ್ಥಿಗಳಿಗೆ ಗ್ರಂಥಾಲಯ ಸೌಕರ್ಯ ಒದಗಿಸುವುದು ಹಾಗೂ ಅಭ್ಯರ್ಥಿಗಳಿಗೆ ಶಿಷ್ಯವೇತನ ನೀಡುವುದು ಈ ಸಂಸ್ಥೆಯ ಮುಖ್ಯ ಧ್ಯೇಯವಾಗಿದೆ. ಗ್ರಾಮಾಂತರ ಪ್ರದೇಶಗಳಿಂದ ಬರುವ ತರಬೇತಿದಾರರಿಗೆ ವಸತಿ ಸೌಕರ್ಯವನ್ನು ಕಲ್ಪಿಸಲಾಗಿದೆ.

**ಪರೀಕ್ಷಾ ಪೂರ್ವ ತರಬೇತಿ ಕೇಂದ್ರದ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದ ಕರ್ತವ್ಯ ಪಾಲನೆಗಳು**

ಪರೀಕ್ಷಾ ಪೂರ್ವ ತರಬೇತಿ ಕೇಂದ್ರದ ನಿರ್ವಹಣೆಗಾಗಿ ಈ ಕೆಳಕಂಡ ಅಧಿಕಾರಿ ಹಾಗೂ ಸಿಬ್ಬಂದಿ ವರ್ಗವು ಇರುತ್ತದೆ.

| | | |
|---|---|---|
| 1) | ಪ್ರಾಂಶುಪಾಲರು | 1 |
| 2) | ಕಛೇರಿ ಅಧೀಕ್ಷಕರು | 1 |
| 3) | ಗ್ರಂಥ ಪಾಲಕರು | 1 |
| 4) | ಪ್ರಥಮ ದರ್ಜೆ ಸಹಾಯಕರು | 1 |
| 5) | ಶೀಘ್ರಲಿಪಿಗಾರರು | 1 |
| 6) | ಗ್ರೂಪ್ ಡಿ | 3 |
| 7) | ಅಡಿಗೆಯವರು/ಅಡಿಗೆ ಸಹಾಯಕರು. | 3 |

**ಪ್ರಾಂಶುಪಾಲರ ಕರ್ತವ್ಯಗಳು:**

ಪ್ರಾಂಶುಪಾಲರು, ಪರೀಕ್ಷಾ ಪೂರ್ವ ತರಬೇತಿ ಕೇಂದ್ರದ ಎಲ್ಲಾ ಕಾರ್ಯಕಲಾಪಗಳಿಗೆ ಕಛೇರಿ ಮುಖ್ಯಸ್ಥರು ಹಾಗೂ ನಿಯಂತ್ರಣಾಧಿಕಾರಿಗಳಾಗಿದ್ದಾರೆ. ಕೇಂದ್ರ ಹಾಗೂ ರಾಜ್ಯ ಸರ್ಕಾರಗಳ ಮಾರ್ಗಸೂಚನೆಗೆ ಅನುಗುಣವಾಗಿ ಪರಿಶಿಷ್ಟ ಜಾತಿ/ಪರಿಶಿಷ್ಟ ವರ್ಗ/ಹಿಂದುಳಿದ ವರ್ಗ ಹಾಗೂ ಅಲ್ಪಸಂಖ್ಯಾತ ಅಭ್ಯರ್ಥಿಗಳಿಗೆ ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ಸ್ಪರ್ಧಿಸಲು ವರ್ಷವಾರು ಕಾರ್ಯಕ್ರಮವನ್ನು ರೂಪಿಸುವುದು ಹಾಗೂ ಅನುಷ್ಠಾನಗೊಳಿಸಲು ಕಾರ್ಯಕರ್ತರಾಗಿರುತ್ತಾರೆ.

**ಕಛೇರಿ ಅಧೀಕ್ಷಕರ ಕರ್ತವ್ಯಗಳು:**

ಪರೀಕ್ಷಾ ಪೂರ್ವ ತರಬೇತಿ ಕೇಂದ್ರದ ಕಛೇರಿ ಅಧೀಕ್ಷಕರು ಕಛೇರಿಯ ಎಲ್ಲಾ ಕಾರ್ಯಕಲಾಪಗಳ ಮೇಲು ಉಸ್ತುವಾರಿ ಮಾಡುವವರಾಗಿದ್ದು, ಕೇಂದ್ರದ ಪ್ರತಿ ನಿತ್ಯದ ತರಬೇತಿ ಕಾರ್ಯಕ್ರಮ ರೂಪಿಸಲು ಹಾಗೂ ಅನುಷ್ಠಾನಗೊಳಿಸಲು ಕಾರಣರಸ್ಥರಾಗಿರುತ್ತಾರೆ. ಅತಿಥಿ ಉಪನ್ಯಾಸಕರನ್ನು ವಿಶ್ವ ವಿದ್ಯಾಲಯ/ಪ್ರತಿಷ್ಠಿತ ಶಿಕ್ಷಣ ಸಂಸ್ಥೆಗಳಿಂದ ಕರೆಸಿ ವೇಳಾಪಟ್ಟಿ ಅನುಗುಣವಾಗಿ ತರಬೇತಿ ಕಾರ್ಯಕ್ರಮ ಅನುಷ್ಠಾನಗೊಳಿಸಲು ಕಾರ್ಯಕರ್ತರಾಗಿರುತ್ತಾರೆ. ಉದ್ಯೋಗ ಅವಕಾಶ ಕಲ್ಪಿಸುವ ವಿವಿಧ ಸ್ಪರ್ಧಾತ್ಮಕ ಪರೀಕ್ಷೆಗಳ ದಿನಪತ್ರಿಕೆ ಪ್ರಕಟಣೆಗಳನ್ನು ಗಮನಿಸಿ ತರಬೇತಿ ಕಾರ್ಯಕ್ರಮ ಹಮ್ಮಿಕೊಳ್ಳಲು ಪ್ರಾಂಶುಪಾಲರಿಗೆ ಸಹಾಯಕರಾಗಿ ಕಾರ್ಯನಿರ್ವಹಿಸುವುದು ಇವರ ಜವಾಬ್ದಾರಿಯಾಗಿರುತ್ತದೆ.

**ಪ್ರಥಮ ದರ್ಜೆ ಸಹಾಯಕರ ಕರ್ತವ್ಯಗಳು:**

ಪರೀಕ್ಷಾ ಪೂರ್ವ ತರಬೇತಿ ಕೇಂದ್ರದ, ಪ್ರಥಮ ದರ್ಜೆ ಸಹಾಯಕರು ಕಛೇರಿಯ ಎಲ್ಲಾ ಲೆಕ್ಕಪತ್ರ, ವ್ಯವಹಾರ ಕೆಲಸಗಳ ನಿರ್ವಹಣೆಗೆ ಕಾರ್ಯಕರ್ತರಾಗಿರುತ್ತಾರೆ. ವಿದ್ಯಾರ್ಥಿಗಳಿಗೆ ಶಿಷ್ಯವೇತನ ವಿತರಣೆ ಹಾಗೂ ಉಪನ್ಯಾಸಕರಿಗೆ ಗೌರವಧನ ವಿತರಣೆ ಮಾಡಲು ಕಾಲಮಿತಿಯೊಳಗೆ ಕಾರ್ಯನಿರ್ವಹಿಸಲು ಜವಾಬ್ದಾರಿಯಾಗಿರುತ್ತಾರೆ. ಅಧಿಕಾರಿ, ಸಿಬ್ಬಂದಿ ವರ್ಗದ ವೇತನ ಬಿಲ್ಲು, ಕಛೇರಿ ಅಧೀಕ್ಷಕರ ಸಾದಿಲ್ವಾರು ವೆಚ್ಚಗಳ ಬಿಲ್ಲುಗಳು ಹಾಗೂ ಇತರೆ ಬಿಲ್ಲುಗಳ ತಯಾರಿಕೆ, ಮಾಸಿಕ ಲೆಕ್ಕ ತಃಖ್ತೆಗಳ ಹಾಗೂ ಇತರೆ ನಿಯತಕಾಲಿಕ ಮಾಹಿತಿಗಳನ್ನು ಮೇಲಾಧಿಕಾರಿಗಳಿಗೆ ಸಲ್ಲಿಸುವುದು ಇವರ ಕರ್ತವ್ಯವಾಗಿದೆ. ತರಬೇತಿ ಕಾರ್ಯಕ್ರಮಗಳ ಕಡತ ನಿರ್ವಹಣೆ ಇವರ ಜವಾಬ್ದಾರಿಯಾಗಿದೆ.

**ಶೀಘ್ರಲಿಪಿಗಾರರ ಕರ್ತವ್ಯಗಳು:**

ಕಛೇರಿಯ ಎಲ್ಲಾ ಬೆರಳಚ್ಚು ಕೆಲಸ ಗಣಕ ಯಂತ್ರ ನಿರ್ವಹಣೆ ಹಾಗೂ ಲೇಖನ ಸಾಮಗ್ರಿ, ಜಡವಸ್ತುಗಳ ನಿರ್ವಹಣೆ ಇವರ ಕರ್ತವ್ಯವಾಗಿದೆ.

ಪರೀಕ್ಷಾ ಪೂರ್ವ ತರಬೇತಿ ಕೇಂದ್ರವು ಸಮಾಜ ಕಲ್ಯಾಣ ಇಲಾಖೆಯ ಆಯುಕ್ತರ ನಿಯಂತ್ರಣದಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಪ್ರತಿ ಆರ್ಥಿಕ ವರ್ಷಕ್ಕೆ ಅನ್ವಯಿಸುವಂತೆ, ಕೇಂದ್ರ ಪುರಸ್ಕೃತ ತರಬೇತಿ ಯೋಜನಾ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಕೇಂದ್ರದ ಶೇ.50 ಭಾಗ ಹಾಗೂ ರಾಜ್ಯದ ಶೇ.50 ಭಾಗ ನೆರವಿನೊಂದಿಗೆ ಅನುಷ್ಠಾನಗೊಳಿಸಲಾಗುತ್ತಿದೆ. ಕೇಂದ್ರ, ರಾಜ್ಯ ಸರ್ಕಾರದ ಮಾರ್ಗ ಸೂಚನೆಗೆ ಅನುಗುಣವಾಗಿ ತರಬೇತಿ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲು ಈ ಕೆಳಕಂಡ ವಿಧಾನಗಳನ್ನು ಅನುಸರಿಸಲಾಗುತ್ತಿದೆ.

1) ಕೇಂದ್ರ ಹಾಗೂ ರಾಜ್ಯ ಸರ್ಕಾರಗಳ ನೇಮಕಾತಿ ಪ್ರಾಧಿಕಾರಗಳು ಗ್ರೂಪ್ ಎ.ಬಿ.ಸಿ ಹುದ್ದೆಗಳ ಭರ್ತಿಗಾಗಿ ನಡೆಸುವ ಸ್ಪರ್ಧಾತ್ಮಕ ಪರೀಕ್ಷೆಗಳ ಅಧಿಸೂಚನೆಗಳಿಗೆ ಅನುಗುಣವಾಗಿ ತರಬೇತಿ ಕಾರ್ಯಕ್ರಮಗಳನ್ನು ರೂಪಿಸಲಾಗುತ್ತದೆ.

2) ತರಬೇತಿಗೆ ಪ.ಜಾತಿ/ಪ.ವರ್ಗ/ಹಿಂ.ವರ್ಗ ಹಾಗೂ ಅಲ್ಪಸಂಖ್ಯಾತ ಅಭ್ಯರ್ಥಿಗಳಿಂದ ಅರ್ಜಿ ಆಹ್ವಾನಿಸಲು ಪ್ರಮುಖ ದಿನ ಪತ್ರಿಕೆಗಳಲ್ಲಿ ಜಾಹಿರಾತು ನೀಡಿ ಹೆಚ್ಚು ಪ್ರಚಾರದೊಂದಿಗೆ ತರಬೇತಿ ಕಾರ್ಯಕ್ರಮದ ಬಗ್ಗೆ ಮಾಹಿತಿ ನೀಡಲಾಗುತ್ತಿದೆ.

3) ತರಬೇತಿ ಕೋರಿ ಸಲ್ಲಿಸಿದ ಅರ್ಜಿಗಳನ್ನು ವರ್ಗವಾರು ಹಾಗೂ ಅರ್ಹತೆ ಆಧಾರದ ಮೇಲೆ ಈ ಕೆಳಕಂಡ ಮೀಸಲಾತಿ ಅನುಪಾತದಲ್ಲಿ ಆಯ್ಕೆ ಸಮಿತಿ ಮುಖಾಂತರ ತರಬೇತಿಗೆ ಆಯ್ಕೆ ಮಾಡಲಾಗುತ್ತದೆ.

| | | |
|---|---|---|
| 1) | ಪರಿಶಿಷ್ಟ ಜಾತಿ | ಶೇ. 50 ಭಾಗ |
| 2) | ಹಿಂದುಳಿದ ವರ್ಗ | ಶೇ. 30 ಭಾಗ |
| 3) | ಅಲ್ಪ ಸಂಖ್ಯಾತರು | ಶೇ. 20 ಭಾಗ |

ತರಬೇತಿಗೆ ಆಯ್ಕೆಯಾದ ಅಭ್ಯರ್ಥಿಗಳಿಗೆ ಈ ಕೆಳಕಂಡಂತೆ ಮಾಸಿಕ ಶಿಷ್ಯವೇತನವನ್ನು ನೀಡಲಾಗುತ್ತಿದೆ.

| | | ನಗರ ರೂ.ಗಳಲ್ಲಿ | ಗ್ರಾಮಾಂತರ ರೂ.ಗಳಲ್ಲಿ |
|---|---|---|---|
| 1) | ಐ.ಎ.ಎಸ್/ಐ.ಪಿ.ಎಸ್/ಕೆ.ಎ.ಎಸ್. | 225-00 | 700-00 |
| 2) | ಇತರೆ ಸ್ಪರ್ಧಾತ್ಮಕ ಪರೀಕ್ಷೆಗಳು | 125-00 | 375-00 |

ಪರೀಕ್ಷಾ ಪೂರ್ವ ತರಬೇತಿ ಕೇಂದ್ರದ ಅಧಿಕಾರಿ, ಸಿಬ್ಬಂದಿ ವರ್ಗದವರ ಪೂರ್ಣ ಮಾಹಿತಿಗಳು ಹಾಗೂ ಅವರು ಪಡೆಯುವ ವೇತನ ಭತ್ಯೆಗಳ ಬಗ್ಗೆ ಪೂರ್ಣ ಮಾಹಿತಿ/ದಾಖಲಾತಿಗಳು ಲಭ್ಯವಿರುತ್ತವೆ.

ಪರೀಕ್ಷಾ ಪೂರ್ವ ತರಬೇತಿ ಕೇಂದ್ರದಲ್ಲಿ ನಡೆಯುವ ಎಲ್ಲಾ ತರಬೇತಿ ಕಾರ್ಯಕ್ರಮಗಳ ಬಗ್ಗೆ ಲಿಖಿತ ಮಾಹಿತಿ/ಸುತ್ತೋಲೆ/ಬ್ರೋಚರ ಹಾಗೂ ಸ್ಮರಣ ಸಂಚಿಕೆಗಳು ಸಾರ್ವಜನಿಕರ ಮಾಹಿತಿಗಾಗಿ ಕಛೇರಿ ವೇಳೆಯಲ್ಲಿ ಲಭ್ಯವಿರುತ್ತವೆ.

ಸಾರ್ವಜನಿಕರಿಗೆ ಮಾಹಿತಿನೀಡುವ ಅಧಿಕಾರಿಗಳ ವಿವರ.

ಪರೀಕ್ಷಾ ಪೂರ್ವ ತರಬೇತಿ ಕೇಂದ್ರದ ಎಲ್ಲಾ ರೀತಿಯ ಮಾಹಿತಿಯನ್ನು ಪ್ರಾಚಾರ್ಯರಿಂದ ಹಾಗೂ ಅವರಿಗೆ ಸಹಾಯಕರಾದ ಕಛೇರಿ ಅಧೀಕ್ಷಕರಿಂದ ಪಡೆಯಬಹುದು.

ಪ್ರಾಚಾರ್ಯರು,
ಪಿ.ಆರ್. 594 ಪರೀಕ್ಷಾ ಪೂರ್ವ ತರಬೇತಿ ಕೇಂದ್ರ, ಬೆಂಗಳೂರು.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ

### ಅಂತಿಮ ಅಧಿಸೂಚನೆ ಸಂಖ್ಯೆ: ಜಿನಕೋ ಎಸ್‌ಎಲ್‌ಎಂ:ಸಿಆರ್-1/2005-06, ದಿನಾಂಕ: 24ನೇ ಫೆಬ್ರವರಿ 2006

ಶಿವಮೊಗ್ಗ ನಗರಸಭೆ ವ್ಯಾಪ್ತಿಯಲ್ಲಿನ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶದಲ್ಲಿ ತಗ್ಗಾದ ಜಾಗಗಳಿದ್ದು, ಸದರಿ ಪ್ರದೇಶದಲ್ಲಿ ಇರುವ ವಾಸದ ಮನೆಗಳು ಒತ್ತೊತ್ತಾಗಿ ಹಾಗೂ ಜನ ಸಂದಣಿಯಿಂದ ಕೂಡಿದ್ದು, ಹಾಲಿ ಇರುವ ಗುಡಿಸಲು/ಕಟ್ಟಡಗಳು ದುರಸ್ತಿಯಿಲ್ಲದೇ ಕುಡಿಯುವ ನೀರು, ಬೀದಿ ದೀಪ, ರಸ್ತೆ ಚರಂಡಿ, ಶೌಚಾಲಯ ಇತ್ಯಾದಿ ಮೂಲಭೂತ ಸೌಕರ್ಯಗಳಿಲ್ಲದೇ ಸದರಿ ಪ್ರದೇಶವು ಮಾಲಿನ್ಯ ಹಾಗೂ ಅನಾರೋಗ್ಯ ವಾತಾವರಣದಿಂದ ಕೂಡಿರುವುದರಿಂದ ಈ ಕೆಳಕಂಡ ಷೆಡ್ಯೂಲ್ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳು (ಅಭಿವೃದ್ಧಿ ಮತ್ತು ನಿರ್ಮೂಲನ) ಕಾಯಿದೆ 1973ರ ಕಲಂ 3ರ ಪ್ರಕಾರ ಕೊಳಚೆ ಪ್ರದೇಶವೆಂದು ಘೋಷಿಸಲು ಪ್ರಾಥಮಿಕ ಅಧಿಸೂಚನೆಯನ್ನು ಅಧಿಸೂಚನೆ ನಂ. ಜಿನಕೋ ಎಸ್‌ಎಲ್‌ಎಂ:ಸಿಆರ್-1/2005-06, ದಿನಾಂಕ: 02.07.2005 ರಂತೆ ಕರ್ನಾಟಕ ರಾಜ್ಯಪತ್ರದ ಭಾಗ-6 ರಲ್ಲಿ ದಿನಾಂಕ: 21.07.2005 ರಲ್ಲಿ ಪುಟಸಂಖ್ಯೆ 444 ರಂತೆ ಪ್ರಕಟಿಸಲಾಗಿದೆ. ಈ ವಿಚಾರದಲ್ಲಿ ಯಾವುದೇ ತಕರಾರು ಬಂದಿಲ್ಲವೆಂದು ವರದಿಯಾಗಿದೆ. ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿ, ಬೆಂಗಳೂರುರವರು ದಿನಾಂಕ: 24.06.2005 ರಲ್ಲಿ ಸಲ್ಲಿಸಿರುವ ಪ್ರಸ್ತಾವನೆಯನ್ನು ಅಂಗೀಕರಿಸಲಾಗಿದೆ.

ಶಿವಮೊಗ್ಗ ನಗರಸಭೆ ವ್ಯಾಪ್ತಿಯ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶವು ತಗ್ಗಾದ ಜಾಗದಲ್ಲಿದ್ದು, ಈ ಪ್ರದೇಶದಲ್ಲಿ ಇರುವ ವಾಸದ ಮನೆಗಳು ಒತ್ತೊತ್ತಾಗಿದ್ದು, ಜನ ಸಂದಣಿಯಿಂದ ಕೂಡಿದೆ. ಈ ಪ್ರದೇಶದಲ್ಲಿರುವ ಗುಡಿಸಲು/ಶೆಡ್‌ಗಳು ದುರಸ್ತಿಯಿಲ್ಲದೇ ಕುಡಿಯುವ ನೀರು, ಬೀದಿ ದೀಪ, ರಸ್ತೆ ಚರಂಡಿ, ಶೌಚಾಲಯ ಇತ್ಯಾದಿ ಮೂಲಭೂತ ಸೌಕರ್ಯಗಳಿಲ್ಲದೇ ಸದರಿ ಪ್ರದೇಶವು ಮಾಲಿನ್ಯ ಹಾಗೂ ಅನಾರೋಗ್ಯ ವಾತಾವರಣದಿಂದ ಕೂಡಿರುವುದು ದೃಢಪಡುವುದರಿಂದ ಕರ್ನಾಟಕ ಕೊಳಚೆ ಪ್ರದೇಶಗಳು (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯಿದೆ 1973ರ ಕಲಂ 03 ರಂತೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಟಿ.ಕೆ. ಅನಿಲ್‌ಕುಮಾರ್, ಜಿಲ್ಲಾಧಿಕಾರಿ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆಗಿರುವ ನಾನು ಈ ಕೆಳಕಂಡ ಷೆಡ್ಯೂಲ್ ಪ್ರದೇಶವನ್ನು 'ಕೊಳಚೆ ಪ್ರದೇಶ' ಎಂದು ಘೋಷಿಸುತ್ತೇನೆ.

**ಷೆಡ್ಯೂಲ್**

| ಕ್ರಮ ಸಂಖ್ಯೆ | ಪ್ರದೇಶದ ಹೆಸರು ಮತ್ತು ಸದರಿ ಪ್ರದೇಶ ಇರುವ ಸ್ಥಳದ ವಿವರ | ಪ್ರಸ್ತಾವಿತ ಪ್ರದೇಶವು ಇರುವ ಜಾಗದ ಮಾಲೀಕರ ಹೆಸರು | ಪ್ರಸ್ತಾಪಿತ ಪ್ರದೇಶವು ಇರುವ ಜಾಗದ ವಿವರ | | |
|---|---|---|---|---|---|
| | | | ತಾಲ್ಲೂಕು ಗ್ರಾಮ ಸ.ನಂ. | ವಿಸ್ತೀರ್ಣ | ಚೆಕ್ಕುಬಂದಿ |
| 1 | ಶಿವಮೊಗ್ಗ ನಗರ ಬೊಮ್ಮನಕಟ್ಟೆ ವಾರ್ಡ್ ನಂ.1 | ನಗರಸಭೆ (ಗ್ರಾಮಠಾಣ) | ಶಿವಮೊಗ್ಗ ತಾಲ್ಲೂಕು, ಬೊಮ್ಮನಕಟ್ಟೆ (ಗ್ರಾಮಠಾಣ) | 5.02 | ಪೂರ್ವ: ರಸ್ತೆ ಮತ್ತು ಸ.ನಂ. 1,2,3<br>ಪಶ್ಚಿಮ: ಸ.ನಂ. 115, 116, 117, 118, 119, 120.<br>ಉತ್ತರ: ಹಳ್ಳ, ಸ.ನಂ.127 (ಹಿಡುವಳಿ ಜಮೀನು)<br>ದಕ್ಷಿಣ: ಸ.ನಂ. 20, 21, 22 (ಹಿಡುವಳಿ ಜಮೀನು) |

**ಟಿ.ಕೆ. ಅನಿಲ್ ಕುಮಾರ್**
ಜಿಲ್ಲಾಧಿಕಾರಿ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ

### ಅಂತಿಮ ಅಧಿಸೂಚನೆ ಸಂಖ್ಯೆ: ಜಿನಕೋ ಎಸ್‌ಎಲ್‌ಎಂ:ಸಿಆರ್-2/2005-06, ದಿನಾಂಕ: 24ನೇ ಫೆಬ್ರವರಿ 2006

ಶಿವಮೊಗ್ಗ ನಗರಸಭೆ ವ್ಯಾಪ್ತಿಯಲ್ಲಿನ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶದಲ್ಲಿ ತಗ್ಗಾದ ಜಾಗಗಳಿದ್ದು, ಸದರಿ ಪ್ರದೇಶದಲ್ಲಿ ಇರುವ ವಾಸದ ಮನೆಗಳು ಒತ್ತೊತ್ತಾಗಿ ಹಾಗೂ ಜನ ಸಂದಣಿಯಿಂದ ಕೂಡಿದ್ದು, ಹಾಲಿ ಇರುವ ಗುಡಿಸಲು/ಕಟ್ಟಡಗಳು ದುರಸ್ತಿಯಿಲ್ಲದೇ ಕುಡಿಯುವ ನೀರು, ಬೀದಿ ದೀಪ, ರಸ್ತೆ ಚರಂಡಿ, ಶೌಚಾಲಯ ಇತ್ಯಾದಿ ಮೂಲಭೂತ ಸೌಕರ್ಯಗಳಿಲ್ಲದೇ ಸದರಿ ಪ್ರದೇಶವು ಮಾಲಿನ್ಯ ಹಾಗೂ ಅನಾರೋಗ್ಯ ವಾತಾವರಣದಿಂದ ಕೂಡಿರುವುದರಿಂದ ಈ ಕೆಳಕಂಡ ಷೆಡ್ಯೂಲ್ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳು (ಅಭಿವೃದ್ಧಿ ಮತ್ತು ನಿರ್ಮೂಲನ) ಕಾಯಿದೆ 1973ರ ಕಲಂ 3ರ ಪ್ರಕಾರ ಕೊಳಚೆ ಪ್ರದೇಶವೆಂದು ಘೋಷಿಸಲು ಪ್ರಾಥಮಿಕ ಅಧಿಸೂಚನೆಯನ್ನು ಅಧಿಸೂಚನೆ ನಂ. ಜಿನಕೋ ಎಸ್‌ಎಲ್‌ಎಂ:ಸಿಆರ್-2/2005-06, ದಿನಾಂಕ: 02.07.2005 ರಂತೆ ಕರ್ನಾಟಕ ರಾಜ್ಯಪತ್ರದ ಭಾಗ-6 ರಲ್ಲಿ ದಿನಾಂಕ: 21.07.2005 ರಲ್ಲಿ ಪುಟಸಂಖ್ಯೆ 445 ರಂತೆ ಪ್ರಕಟಿಸಲಾಗಿದೆ. ಈ ವಿಚಾರದಲ್ಲಿ ಯಾವುದೇ ತಕರಾರು ಬಂದಿಲ್ಲವೆಂದು ವರದಿಯಾಗಿದೆ. ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿ, ಬೆಂಗಳೂರುರವರು ದಿನಾಂಕ: 24.06.2005 ರಲ್ಲಿ ಸಲ್ಲಿಸಿರುವ ಪ್ರಸ್ತಾವನೆಯನ್ನು ಅಂಗೀಕರಿಸಲಾಗಿದೆ.

ಶಿವಮೊಗ್ಗ ನಗರಸಭೆ ವ್ಯಾಪ್ತಿಯ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶವು ತಗ್ಗಾದ ಜಾಗದಲ್ಲಿದ್ದು, ಈ ಪ್ರದೇಶದಲ್ಲಿ ಇರುವ ವಾಸದ ಮನೆಗಳು ಒತ್ತೊತ್ತಾಗಿದ್ದು, ಜನ ಸಂದಣಿಯಿಂದ ಕೂಡಿದೆ. ಈ ಪ್ರದೇಶದಲ್ಲಿರುವ ಗುಡಿಸಲು/ಶೆಡ್‌ಗಳು ದುರಸ್ತಿಯಿಲ್ಲದೇ ಕುಡಿಯುವ ನೀರು, ಬೀದಿ ದೀಪ, ರಸ್ತೆ ಚರಂಡಿ, ಶೌಚಾಲಯ ಇತ್ಯಾದಿ ಮೂಲಭೂತ ಸೌಕರ್ಯಗಳಿಲ್ಲದೇ ಸದರಿ ಪ್ರದೇಶವು ಮಾಲಿನ್ಯ ಹಾಗೂ ಅನಾರೋಗ್ಯ ವಾತಾವರಣದಿಂದ ಕೂಡಿರುವುದು ದೃಢಪಡುವುದರಿಂದ ಕರ್ನಾಟಕ ಕೊಳಚೆ ಪ್ರದೇಶಗಳು (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯಿದೆ 1973ರ ಕಲಂ 03 ರಂತೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಟಿ.ಕೆ. ಅನಿಲ್‌ಕುಮಾರ್, ಜಿಲ್ಲಾಧಿಕಾರಿ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆಗಿರುವ ನಾನು ಈ ಕೆಳಕಂಡ ಷೆಡ್ಯೂಲ್ ಪ್ರದೇಶವನ್ನು 'ಕೊಳಚೆ ಪ್ರದೇಶ' ಎಂದು ಘೋಷಿಸುತ್ತೇನೆ.

**ಷೆಡ್ಯೂಲ್**

| ಕ್ರಮ ಸಂಖ್ಯೆ | ಪ್ರದೇಶದ ಹೆಸರು ಮತ್ತು ಸದರಿ ಪ್ರದೇಶ ಇರುವ ಸ್ಥಳದ ವಿವರ | ಪ್ರಸ್ತಾವಿತ ಪ್ರದೇಶವು ಇರುವ ಜಾಗದ ಮಾಲೀಕರ ಹೆಸರು | ಪ್ರಸ್ತಾಪಿತ ಪ್ರದೇಶವು ಇರುವ ಜಾಗದ ವಿವರ | | |
|---|---|---|---|---|---|
| | | | ತಾಲ್ಲೂಕು/ಗ್ರಾಮ/ ಸ.ನಂ. | ವಿಸ್ತೀರ್ಣ ಎಕರೆ ಗುಂಟೆ | ಚೆಕ್ಕುಬಂದಿ |
| 1 | ಶಿವಮೊಗ್ಗ ನಗರ ಮಂಜುನಾಥ ಬಡಾವಣೆ ವಾರ್ಡ್ ನಂ.27 | ಹನುಮಕ್ಕ ಕೋಂ ಕೋಳಿ ನಾಗಪ್ಪ | ಶಿವಮೊಗ್ಗ ತಾಲ್ಲೂಕು, ಮಿಳ್ಳಘಟ್ಟ ಗ್ರಾಮ ಸ.ನಂ.105 | 2.22 | ಪೂರ್ವ: ಖಾಸಗಿ ಮನೆ<br>ಪಶ್ಚಿಮ: ಸರ್ಕಾರಿ ಕೆರೆ<br>ಉತ್ತರ: ಮಂಡ್ಲಿ ಗ್ರಾಮದ ಗಡಿ<br>ದಕ್ಷಿಣ: ಖಾಸಗಿ ಮನೆಗಳು ಮತ್ತು ಸ.ನಂ.108 |

**ಟಿ.ಕೆ. ಅನಿಲ್ ಕುಮಾರ್**

ಜಿಲ್ಲಾಧಿಕಾರಿ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ

### ಅಂತಿಮ ಅಧಿಸೂಚನೆ ಸಂಖ್ಯೆ: ಜಿನಕೋ ಎಸ್‌ಎಲ್‌ಎಂ:ಸಿಆರ್-3/2005-06, ದಿನಾಂಕ: 24ನೇ ಫೆಬ್ರವರಿ 2006

ಶಿವಮೊಗ್ಗ ನಗರಸಭೆ ವ್ಯಾಪ್ತಿಯಲ್ಲಿನ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶದಲ್ಲಿ ತಗ್ಗಾದ ಜಾಗಗಳಿದ್ದು, ಸದರಿ ಪ್ರದೇಶದಲ್ಲಿ ಇರುವ ವಾಸದ ಮನೆಗಳು ಒತ್ತೊತ್ತಾಗಿ ಹಾಗೂ ಜನ ಸಂದಣಿಯಿಂದ ಕೂಡಿದ್ದು, ಹಾಲಿ ಇರುವ ಗುಡಿಸಲು/ಕಟ್ಟಡಗಳು ದುರಸ್ತಿಯಿಲ್ಲದೇ ಕುಡಿಯುವ ನೀರು, ಬೀದಿ ದೀಪ, ರಸ್ತೆ ಚರಂಡಿ, ಶೌಚಾಲಯ ಇತ್ಯಾದಿ ಮೂಲಭೂತ ಸೌಕರ್ಯಗಳಿಲ್ಲದೇ ಸದರಿ ಪ್ರದೇಶವು ಮಾಲಿನ್ಯ ಹಾಗೂ ಅನಾರೋಗ್ಯ ವಾತಾವರಣದಿಂದ ಕೂಡಿರುವುದರಿಂದ ಈ ಕೆಳಕಂಡ ಷೆಡ್ಯೂಲ್ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳು (ಅಭಿವೃದ್ಧಿ ಮತ್ತು ನಿರ್ಮೂಲನ) ಕಾಯಿದೆ 1973ರ ಕಲಂ 3ರ ಪ್ರಕಾರ ಕೊಳಚೆ ಪ್ರದೇಶವೆಂದು ಘೋಷಿಸಲು ಪ್ರಾಥಮಿಕ ಅಧಿಸೂಚನೆಯನ್ನು ಅಧಿಸೂಚನೆ ನಂ. ಜಿನಕೋ ಎಸ್‌ಎಲ್‌ಎಂ:ಸಿಆರ್-3/2005-06, ದಿನಾಂಕ: 02.07.2005 ರಂತೆ ಕರ್ನಾಟಕ ರಾಜ್ಯಪತ್ರದ ಭಾಗ-6 ರಲ್ಲಿ ದಿನಾಂಕ: 21.07.2005 ರಲ್ಲಿ ಪುಟಸಂಖ್ಯೆ 445 ರಿಂದ 446 ರಂತೆ ಪ್ರಕಟಿಸಲಾಗಿದೆ. ಈ ವಿಚಾರದಲ್ಲಿ ಯಾವುದೇ ತಕರಾರು ಬಂದಿಲ್ಲವೆಂದು ವರದಿಯಾಗಿದೆ. ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿ, ಬೆಂಗಳೂರುರವರು ದಿನಾಂಕ: 24.06.2005 ರಲ್ಲಿ ಸಲ್ಲಿಸಿರುವ ಪ್ರಸ್ತಾವನೆಯನ್ನು ಅಂಗೀಕರಿಸಲಾಗಿದೆ.

ಶಿವಮೊಗ್ಗ ನಗರಸಭೆ ವ್ಯಾಪ್ತಿಯ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶವು ತಗ್ಗಾದ ಜಾಗದಲ್ಲಿದ್ದು, ಈ ಪ್ರದೇಶದಲ್ಲಿ ಇರುವ ವಾಸದ ಮನೆಗಳು ಒತ್ತೊತ್ತಾಗಿದ್ದು, ಜನ ಸಂದಣಿಯಿಂದ ಕೂಡಿದೆ. ಈ ಪ್ರದೇಶದಲ್ಲಿರುವ ಗುಡಿಸಲು/ಶೆಡ್‌ಗಳು ದುರಸ್ತಿಯಿಲ್ಲದೇ ಕುಡಿಯುವ ನೀರು, ಬೀದಿ ದೀಪ, ರಸ್ತೆ ಚರಂಡಿ, ಶೌಚಾಲಯ ಇತ್ಯಾದಿ ಮೂಲಭೂತ ಸೌಕರ್ಯಗಳಿಲ್ಲದೇ ಸದರಿ ಪ್ರದೇಶವು ಮಾಲಿನ್ಯ ಹಾಗೂ ಅನಾರೋಗ್ಯ ವಾತಾವರಣದಿಂದ ಕೂಡಿರುವುದು ದೃಢಪಡುವುದರಿಂದ ಕರ್ನಾಟಕ ಕೊಳಚೆ ಪ್ರದೇಶಗಳು (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯಿದೆ 1973ರ ಕಲಂ 03 ರಂತೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಟಿ.ಕೆ. ಅನಿಲ್‌ಕುಮಾರ್, ಜಿಲ್ಲಾಧಿಕಾರಿ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆಗಿರುವ ನಾನು ಈ ಕೆಳಕಂಡ ಷೆಡ್ಯೂಲ್ ಪ್ರದೇಶವನ್ನು 'ಕೊಳಚೆ ಪ್ರದೇಶ' ಎಂದು ಘೋಷಿಸುತ್ತೇನೆ.

**ಷೆಡ್ಯೂಲ್**

| ಕ್ರಮ ಸಂಖ್ಯೆ | ಪ್ರದೇಶದ ಹೆಸರು ಮತ್ತು ಸದರಿ ಪ್ರದೇಶ ಇರುವ ಸ್ಥಳದ ವಿವರ | ಪ್ರಸ್ತಾವಿತ ಪ್ರದೇಶವು ಇರುವ ಜಾಗದ ಮಾಲೀಕರ ಹೆಸರು | ಪ್ರಸ್ತಾಪಿತ ಪ್ರದೇಶವು ಇರುವ ಜಾಗದ ವಿವರ | | |
|---|---|---|---|---|---|
| | | | ತಾಲ್ಲೂಕು/ಗ್ರಾಮ/ ಸ.ನಂ. | ವಿಸ್ತೀರ್ಣ ಎಕರೆ ಗುಂಟೆ | ಚೆಕ್ಕುಬಂದಿ |
| 1 | ಶಿವಮೊಗ್ಗ ನಗರ ಅಶೋಕನಗರ ವಾರ್ಡ್ ನಂ.31 | ಸರ್ಕಾರಿ ಖರಾಬು ಕೆರೆ | ಶಿವಮೊಗ್ಗ ತಾಲ್ಲೂಕು, ಮಿಳ್ಳಘಟ್ಟ ಗ್ರಾಮ ಸ.ನಂ.11 | 2.20 | ಪೂರ್ವ: ಚಾನಲ್ ಸ.ನಂ.10<br>ಪಶ್ಚಿಮ: ಗೋಪಾಳ ಗ್ರಾಮದ ಗಡಿ<br>ಉತ್ತರ: ಸ.ನಂ.12<br>ದಕ್ಷಿಣ: ಸ.ನಂ.9 |

**ಟಿ.ಕೆ. ಅನಿಲ್ ಕುಮಾರ್**

ಜಿಲ್ಲಾಧಿಕಾರಿ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ

### ಅಂತಿಮ ಅಧಿಸೂಚನೆ ಸಂಖ್ಯೆ: ಜಿನಕೋ ಎಸ್‌ಎಲ್‌ಎಂ:ಸಿಆರ್-4/2005-06, ದಿನಾಂಕ: 24ನೇ ಫೆಬ್ರವರಿ 2006

ಶಿವಮೊಗ್ಗ ನಗರಸಭೆ ವ್ಯಾಪ್ತಿಯಲ್ಲಿನ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶದಲ್ಲಿ ತಗ್ಗಾದ ಜಾಗಗಳಿದ್ದು, ಸದರಿ ಪ್ರದೇಶದಲ್ಲಿ ಇರುವ ವಾಸದ ಮನೆಗಳು ಒತ್ತೊತ್ತಾಗಿ ಹಾಗೂ ಜನ ಸಂದಣಿಯಿಂದ ಕೂಡಿದ್ದು, ಹಾಲಿ ಇರುವ ಗುಡಿಸಲು/ಕಟ್ಟಡಗಳು ದುರಸ್ತಿಯಿಲ್ಲದೇ ಕುಡಿಯುವ ನೀರು, ಬೀದಿ ದೀಪ, ರಸ್ತೆ ಚರಂಡಿ, ಶೌಚಾಲಯ ಇತ್ಯಾದಿ ಮೂಲಭೂತ ಸೌಕರ್ಯಗಳಿಲ್ಲದೇ ಸದರಿ ಪ್ರದೇಶವು ಮಾಲಿನ್ಯ ಹಾಗೂ ಅನಾರೋಗ್ಯ ವಾತಾವರಣದಿಂದ ಕೂಡಿರುವುದರಿಂದ ಈ ಕೆಳಕಂಡ ಷೆಡ್ಯೂಲ್ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳು (ಅಭಿವೃದ್ಧಿ ಮತ್ತು ನಿರ್ಮೂಲನ) ಕಾಯಿದೆ 1973ರ ಕಲಂ 3ರ ಪ್ರಕಾರ ಕೊಳಚೆ ಪ್ರದೇಶವೆಂದು ಘೋಷಿಸಲು ಪ್ರಾಥಮಿಕ ಅಧಿಸೂಚನೆಯನ್ನು ಅಧಿಸೂಚನೆ ನಂ. ಜಿನಕೋ ಎಸ್‌ಎಲ್‌ಎಂ:ಸಿಆರ್-4/2005-06, ದಿನಾಂಕ: 02.07.2005 ರಂತೆ ಕರ್ನಾಟಕ ರಾಜ್ಯಪತ್ರದ ಭಾಗ-6 ರಲ್ಲಿ ದಿನಾಂಕ: 21.07.2005 ರಲ್ಲಿ ಪುಟಸಂಖ್ಯೆ

446 ರಂತೆ ಪ್ರಕಟಿಸಲಾಗಿದೆ. ಈ ವಿಚಾರದಲ್ಲಿ ಯಾವುದೇ ತಕರಾರು ಬಂದಿಲ್ಲವೆಂದು ವರದಿಯಾಗಿದೆ. ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿ, ಬೆಂಗಳೂರುರವರು ದಿನಾಂಕ: 24.06.2005 ರಲ್ಲಿ ಸಲ್ಲಿಸಿರುವ ಪ್ರಸ್ತಾವನೆಯನ್ನು ಅಂಗೀಕರಿಸಲಾಗಿದೆ.

ಶಿವಮೊಗ್ಗ ನಗರಸಭೆ ವ್ಯಾಪ್ತಿಯ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶವು ತಗ್ಗಾದ ಜಾಗದಲ್ಲಿದ್ದು, ಈ ಪ್ರದೇಶದಲ್ಲಿ ಇರುವ ವಾಸದ ಮನೆಗಳು ಒತ್ತೊತ್ತಾಗಿದ್ದು, ಜನ ಸಂದಣಿಯಿಂದ ಕೂಡಿದೆ. ಈ ಪ್ರದೇಶದಲ್ಲಿರುವ ಗುಡಿಸಲು/ಶೆಡ್‌ಗಳು ದುರಸ್ತಿಯಿಲ್ಲದೇ ಕುಡಿಯುವ ನೀರು, ಬೀದಿ ದೀಪ, ರಸ್ತೆ ಚರಂಡಿ, ಶೌಚಾಲಯ ಇತ್ಯಾದಿ ಮೂಲಭೂತ ಸೌಕರ್ಯಗಳಿಲ್ಲದೇ ಸದರಿ ಪ್ರದೇಶವು ಮಾಲಿನ್ಯ ಹಾಗೂ ಅನಾರೋಗ್ಯ ವಾತಾವರಣದಿಂದ ಕೂಡಿರುವುದು ದೃಢಪಡುವುದರಿಂದ ಕರ್ನಾಟಕ ಕೊಳಚೆ ಪ್ರದೇಶಗಳು (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯಿದೆ 1973ರ ಕಲಂ 03 ರಂತೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಟಿ.ಕೆ. ಅನಿಲ್‌ಕುಮಾರ್, ಜಿಲ್ಲಾಧಿಕಾರಿ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆಗಿರುವ ನಾನು ಈ ಕೆಳಕಂಡ ಷೆಡ್ಯೂಲ್ ಪ್ರದೇಶವನ್ನು 'ಕೊಳಚೆ ಪ್ರದೇಶ' ಎಂದು ಘೋಷಿಸುತ್ತೇನೆ.

**ಷೆಡ್ಯೂಲ್**

| ಕ್ರಮ ಸಂಖ್ಯೆ | ಪ್ರದೇಶದ ಹೆಸರು ಮತ್ತು ಸದರಿ ಪ್ರದೇಶ ಇರುವ ಸ್ಥಳದ ವಿವರ | ಪ್ರಸ್ತಾವಿತ ಪ್ರದೇಶವು ಇರುವ ಜಾಗದ ಮಾಲೀಕರ ಹೆಸರು | ಪ್ರಸ್ತಾಪಿತ ಪ್ರದೇಶವು ಇರುವ ಜಾಗದ ವಿವರ | | |
|---|---|---|---|---|---|
| | | | ತಾಲ್ಲೂಕು/ಗ್ರಾಮ/ ಸ.ನಂ. | ವಿಸ್ತೀರ್ಣ ಎಕರೆ ಗುಂಟೆ | ಚೆಕ್ಕುಬಂದಿ |
| 1 | ಶಿವಮೊಗ್ಗ ನಗರ ಹಳೇಮಂಡ್ಲಿ ವಾರ್ಡ್ ನಂ.25 | ನಗರಸಭೆ (ಗ್ರಾಮಠಾಣ) | ಶಿವಮೊಗ್ಗ ತಾಲ್ಲೂಕು, ಹಳೇ ಮಂಡ್ಲಿ (ಗ್ರಾಮಠಾಣ) | 9.03 | ಪೂರ್ವ: ಕೃಷ್ಣರಾಜೇಂದ್ರ ನೀರು ಶುದ್ಧೀಕರಣ ಕೇಂದ್ರ (ಸ.ನಂ.267)<br>ಪಶ್ಚಿಮ: ಅರಕೆರೆ ಗ್ರಾಮದ ಗಡಿ<br>ಉತ್ತರ: ಸ.ನಂ. 9, 11, 12, 19, 20, 23, 24, 27<br>ದಕ್ಷಿಣ: ತುಂಗಾನದಿ |

**ಟಿ.ಕೆ. ಅನಿಲ್ ಕುಮಾರ್**

ಜಿಲ್ಲಾಧಿಕಾರಿ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ

### ಅಂತಿಮ ಅಧಿಸೂಚನೆ ಸಂಖ್ಯೆ: ಜಿನಕೋ ಎಸ್‌ಎಲ್‌ಎಂ:ಸಿಆರ್-5/2005-06, ದಿನಾಂಕ: 24ನೇ ಫೆಬ್ರವರಿ 2006

ಶಿವಮೊಗ್ಗ ನಗರಸಭೆ ವ್ಯಾಪ್ತಿಯಲ್ಲಿನ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶದಲ್ಲಿ ತಗ್ಗಾದ ಜಾಗಗಳಿದ್ದು, ಸದರಿ ಪ್ರದೇಶದಲ್ಲಿ ಇರುವ ವಾಸದ ಮನೆಗಳು ಒತ್ತೊತ್ತಾಗಿ ಹಾಗೂ ಜನ ಸಂದಣಿಯಿಂದ ಕೂಡಿದ್ದು, ಹಾಲಿ ಇರುವ ಗುಡಿಸಲು/ಕಟ್ಟಡಗಳು ದುರಸ್ತಿಯಿಲ್ಲದೇ ಕುಡಿಯುವ ನೀರು, ಬೀದಿ ದೀಪ, ರಸ್ತೆ ಚರಂಡಿ, ಶೌಚಾಲಯ ಇತ್ಯಾದಿ ಮೂಲಭೂತ ಸೌಕರ್ಯಗಳಿಲ್ಲದೇ ಸದರಿ ಪ್ರದೇಶವು ಮಾಲಿನ್ಯ ಹಾಗೂ ಅನಾರೋಗ್ಯ ವಾತಾವರಣದಿಂದ ಕೂಡಿರುವುದರಿಂದ ಈ ಕೆಳಕಂಡ ಷೆಡ್ಯೂಲ್ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳು (ಅಭಿವೃದ್ಧಿ ಮತ್ತು ನಿರ್ಮೂಲನ) ಕಾಯಿದೆ 1973ರ ಕಲಂ 3ರ ಪ್ರಕಾರ ಕೊಳಚೆ ಪ್ರದೇಶವೆಂದು ಘೋಷಿಸಲು ಪ್ರಾಥಮಿಕ ಅಧಿಸೂಚನೆಯನ್ನು ಅಧಿಸೂಚನೆ ನಂ. ಜಿನಕೋ ಎಸ್‌ಎಲ್‌ಎಂ:ಸಿಆರ್-5/2005-06, ದಿನಾಂಕ: 02.07.2005 ರಂತೆ ಕರ್ನಾಟಕ ರಾಜ್ಯಪತ್ರದ ಭಾಗ-6 ರಲ್ಲಿ ದಿನಾಂಕ: 21.07.2005 ರಲ್ಲಿ ಪುಟಸಂಖ್ಯೆ 447 ರಂತೆ ಪ್ರಕಟಿಸಲಾಗಿದೆ. ಈ ವಿಚಾರದಲ್ಲಿ ಯಾವುದೇ ತಕರಾರು ಬಂದಿಲ್ಲವೆಂದು ವರದಿಯಾಗಿದೆ. ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿ, ಬೆಂಗಳೂರುರವರು ದಿನಾಂಕ: 24.06.2005 ರಲ್ಲಿ ಸಲ್ಲಿಸಿರುವ ಪ್ರಸ್ತಾವನೆಯನ್ನು ಅಂಗೀಕರಿಸಲಾಗಿದೆ.

ಶಿವಮೊಗ್ಗ ನಗರಸಭೆ ವ್ಯಾಪ್ತಿಯ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶವು ತಗ್ಗಾದ ಜಾಗದಲ್ಲಿದ್ದು, ಈ ಪ್ರದೇಶದಲ್ಲಿ ಇರುವ ವಾಸದ ಮನೆಗಳು ಒತ್ತೊತ್ತಾಗಿದ್ದು, ಜನ ಸಂದಣಿಯಿಂದ ಕೂಡಿದೆ. ಈ ಪ್ರದೇಶದಲ್ಲಿರುವ ಗುಡಿಸಲು/ಶೆಡ್‌ಗಳು ದುರಸ್ತಿಯಿಲ್ಲದೇ ಕುಡಿಯುವ ನೀರು, ಬೀದಿ ದೀಪ, ರಸ್ತೆ ಚರಂಡಿ, ಶೌಚಾಲಯ ಇತ್ಯಾದಿ ಮೂಲಭೂತ ಸೌಕರ್ಯಗಳಿಲ್ಲದೇ ಸದರಿ ಪ್ರದೇಶವು ಮಾಲಿನ್ಯ ಹಾಗೂ ಅನಾರೋಗ್ಯ ವಾತಾವರಣದಿಂದ ಕೂಡಿರುವುದು ದೃಢಪಡುವುದರಿಂದ ಕರ್ನಾಟಕ ಕೊಳಚೆ ಪ್ರದೇಶಗಳು (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯಿದೆ 1973ರ ಕಲಂ 03 ರಂತೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಟಿ.ಕೆ. ಅನಿಲ್‌ಕುಮಾರ್, ಜಿಲ್ಲಾಧಿಕಾರಿ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆಗಿರುವ ನಾನು ಈ ಕೆಳಕಂಡ ಷೆಡ್ಯೂಲ್ ಪ್ರದೇಶವನ್ನು 'ಕೊಳಚೆ ಪ್ರದೇಶ' ಎಂದು ಘೋಷಿಸುತ್ತೇನೆ.

**ಷೆಡ್ಯೂಲ್**

| ಕ್ರಮ ಸಂಖ್ಯೆ | ಪ್ರದೇಶದ ಹೆಸರು ಮತ್ತು ಸದರಿ ಪ್ರದೇಶ ಇರುವ ಸ್ಥಳದ ವಿವರ | ಪ್ರಸ್ತಾವಿತ ಪ್ರದೇಶವು ಇರುವ ಜಾಗದ ಮಾಲೀಕರ ಹೆಸರು | ಪ್ರಸ್ತಾಪಿತ ಪ್ರದೇಶವು ಇರುವ ಜಾಗದ ವಿವರ | | |
|---|---|---|---|---|---|
| | | | ತಾಲ್ಲೂಕು/ಗ್ರಾಮ/ ಸ.ನಂ. | ವಿಸ್ತೀರ್ಣ ಎಕರೆ ಗುಂಟೆ | ಚೆಕ್ಕುಬಂದಿ |
| 1 | ಶಿವಮೊಗ್ಗ ನಗರ ಶಾಂತಿನಗರ ವಾರ್ಡ್ ನಂ.8 | ಸರ್ಕಾರಿ ಜಾಗ | ಶಿವಮೊಗ್ಗ ತಾಲ್ಲೂಕು, ತ್ಯಾವರೆಚಟ್ನಳ್ಳಿ ಗ್ರಾಮ ಸ.ನಂ.48,54 | 29.00 | ಪೂರ್ವ: ಖಾಸಗಿ ಸ್ವತ್ತು ಸ.ನಂ.53,55,60<br>ಪಶ್ಚಿಮ: ಖಾಸಗಿ ಸ್ವತ್ತು ಸ.ನಂ.46,47<br>ಉತ್ತರ: ಕೆರೆ ಮತ್ತು ಸ.ನಂ.73,74,75<br>ದಕ್ಷಿಣ: ಹಳ್ಳ ಸ.ನಂ. 49 |

**ಟಿ.ಕೆ. ಅನಿಲ್ ಕುಮಾರ್**

ಜಿಲ್ಲಾಧಿಕಾರಿ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ

### ಅಂತಿಮ ಅಧಿಸೂಚನೆ ಸಂಖ್ಯೆ: ಜಿನಕೋ ಎಸ್‌ಎಲ್‌ಎಂ:ಸಿಆರ್-6/2005-06, ದಿನಾಂಕ: 24ನೇ ಫೆಬ್ರವರಿ 2006

ಶಿವಮೊಗ್ಗ ನಗರಸಭೆ ವ್ಯಾಪ್ತಿಯಲ್ಲಿನ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶದಲ್ಲಿ ತಗ್ಗಾದ ಜಾಗಗಳಿದ್ದು, ಸದರಿ ಪ್ರದೇಶದಲ್ಲಿ ಇರುವ ವಾಸದ ಮನೆಗಳು ಒತ್ತೊತ್ತಾಗಿ ಹಾಗೂ ಜನ ಸಂದಣಿಯಿಂದ ಕೂಡಿದ್ದು, ಹಾಲಿ ಇರುವ ಗುಡಿಸಲು/ಕಟ್ಟಡಗಳು ದುರಸ್ತಿಯಿಲ್ಲದೇ ಕುಡಿಯುವ ನೀರು, ಬೀದಿ ದೀಪ, ರಸ್ತೆ ಚರಂಡಿ, ಶೌಚಾಲಯ ಇತ್ಯಾದಿ ಮೂಲಭೂತ ಸೌಕರ್ಯಗಳಿಲ್ಲದೇ ಸದರಿ ಪ್ರದೇಶವು ಮಾಲಿನ್ಯ ಹಾಗೂ ಅನಾರೋಗ್ಯ

ವಾತಾವರಣದಿಂದ ಕೂಡಿರುವುದರಿಂದ ಈ ಕೆಳಕಂಡ ಷೆಡ್ಯೂಲ್ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳು (ಅಭಿವೃದ್ಧಿ ಮತ್ತು ನಿರ್ಮೂಲನ) ಕಾಯಿದೆ 1973ರ ಕಲಂ 3ರ ಪ್ರಕಾರ ಕೊಳಚೆ ಪ್ರದೇಶವೆಂದು ಘೋಷಿಸಲು ಪ್ರಾಥಮಿಕ ಅಧಿಸೂಚನೆಯನ್ನು ಅಧಿಸೂಚನೆ ನಂ. ಜಿನಕೋ ಎಸ್‌ಎಲ್‌ಎಂ:ಸಿಆರ್-6/2005-06, ದಿನಾಂಕ: 02.07.2005 ರಂತೆ ಕರ್ನಾಟಕ ರಾಜ್ಯಪತ್ರದ ಭಾಗ-6 ರಲ್ಲಿ ದಿನಾಂಕ: 21.07.2005 ರಲ್ಲಿ ಪುಟಸಂಖ್ಯೆ 447 ರಿಂದ 448 ರಂತೆ ಪ್ರಕಟಿಸಲಾಗಿದೆ. ಈ ವಿಚಾರದಲ್ಲಿ ಯಾವುದೇ ತಕರಾರು ಬಂದಿಲ್ಲವೆಂದು ವರದಿಯಾಗಿದೆ. ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿ, ಬೆಂಗಳೂರುರವರು ದಿನಾಂಕ: 24.06.2005 ರಲ್ಲಿ ಸಲ್ಲಿಸಿರುವ ಪ್ರಸ್ತಾವನೆಯನ್ನು ಅಂಗೀಕರಿಸಲಾಗಿದೆ.

ಶಿವಮೊಗ್ಗ ನಗರಸಭೆ ವ್ಯಾಪ್ತಿಯ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶವು ತಗ್ಗಾದ ಜಾಗದಲ್ಲಿದ್ದು, ಈ ಪ್ರದೇಶದಲ್ಲಿ ಇರುವ ವಾಸದ ಮನೆಗಳು ಒತ್ತೊತ್ತಾಗಿದ್ದು, ಜನ ಸಂದಣಿಯಿಂದ ಕೂಡಿದೆ. ಈ ಪ್ರದೇಶದಲ್ಲಿರುವ ಗುಡಿಸಲು/ಶೆಡ್‌ಗಳು ದುರಸ್ತಿಯಿಲ್ಲದೇ ಕುಡಿಯುವ ನೀರು, ಬೀದಿ ದೀಪ, ರಸ್ತೆ ಚರಂಡಿ, ಶೌಚಾಲಯ ಇತ್ಯಾದಿ ಮೂಲಭೂತ ಸೌಕರ್ಯಗಳಿಲ್ಲದೇ ಸದರಿ ಪ್ರದೇಶವು ಮಾಲಿನ್ಯ ಹಾಗೂ ಅನಾರೋಗ್ಯ ವಾತಾವರಣದಿಂದ ಕೂಡಿರುವುದು ದೃಢಪಡುವುದರಿಂದ ಕರ್ನಾಟಕ ಕೊಳಚೆ ಪ್ರದೇಶಗಳು (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯಿದೆ 1973ರ ಕಲಂ 03 ರಂತೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಟಿ.ಕೆ. ಅನಿಲ್‌ಕುಮಾರ್, ಜಿಲ್ಲಾಧಿಕಾರಿ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆಗಿರುವ ನಾನು ಈ ಕೆಳಕಂಡ ಷೆಡ್ಯೂಲ್ ಪ್ರದೇಶವನ್ನು 'ಕೊಳಚೆ ಪ್ರದೇಶ' ಎಂದು ಘೋಷಿಸುತ್ತೇನೆ.

**ಷೆಡ್ಯೂಲ್**

| ಕ್ರಮ ಸಂಖ್ಯೆ | ಪ್ರದೇಶದ ಹೆಸರು ಮತ್ತು ಸದರಿ ಪ್ರದೇಶ ಇರುವ ಸ್ಥಳದ ವಿವರ | ಪ್ರಸ್ತಾವಿತ ಪ್ರದೇಶವು ಇರುವ ಜಾಗದ ಮಾಲೀಕರ ಹೆಸರು | ಪ್ರಸ್ತಾಪಿತ ಪ್ರದೇಶವು ಇರುವ ಜಾಗದ ವಿವರ | | |
|---|---|---|---|---|---|
| | | | ತಾಲ್ಲೂಕು/ಗ್ರಾಮ/ ಸ.ನಂ. | ವಿಸ್ತೀರ್ಣ ಎಕರೆ ಗುಂಟೆ | ಚೆಕ್ಕುಬಂದಿ |
| 1 | ಶಿವಮೊಗ್ಗ ನಗರ ಬಸವನಗುಡಿ ಭೋವಿಕಾಲೋನಿ ವಾರ್ಡ್ ನಂ.7 | ಸರ್ಕಾರಿ ಜಾಗ | ಶಿವಮೊಗ್ಗ ತಾಲ್ಲೂಕು, ಮುಳ್ಳುಕೆರೆ ಗ್ರಾಮ ಸ.ನಂ.94 | 5.31 | ಪೂರ್ವ: ರೈಲ್ವೇ ಕ್ವಾಟ್ರರ್ಸ್ ಸ.ನಂ.3,4,5<br>ಪಶ್ಚಿಮ: ಖಾಸಗಿ ನಿವೇಶನಗಳು ಸ.ನಂ.10,47,71,72,73<br>ಉತ್ತರ: ಅಮೀರ್ ಅಹಮದ್ ಕಾಲೋನಿ ಮತ್ತು ಸ.ನಂ.47,75<br>ದಕ್ಷಿಣ: ರಸ್ತೆ ಸ.ನಂ. 8,10 |

**ಟಿ.ಕೆ. ಅನಿಲ್ ಕುಮಾರ್**
ಜಿಲ್ಲಾಧಿಕಾರಿ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ

### ಅಂತಿಮ ಅಧಿಸೂಚನೆ ಸಂಖ್ಯೆ: ಜಿನಕೋ ಎಸ್‌ಎಲ್‌ಎಂ:ಸಿಆರ್-7/2005-06, ದಿನಾಂಕ: 24ನೇ ಫೆಬ್ರವರಿ 2006

ಶಿವಮೊಗ್ಗ ನಗರಸಭೆ ವ್ಯಾಪ್ತಿಯಲ್ಲಿನ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶದಲ್ಲಿ ತಗ್ಗಾದ ಜಾಗಗಳಿದ್ದು, ಸದರಿ ಪ್ರದೇಶದಲ್ಲಿ ಇರುವ ವಾಸದ ಮನೆಗಳು ಒತ್ತೊತ್ತಾಗಿ ಹಾಗೂ ಜನ ಸಂದಣಿಯಿಂದ ಕೂಡಿದ್ದು, ಹಾಲಿ ಇರುವ ಗುಡಿಸಲು/ಕಟ್ಟಡಗಳು ದುರಸ್ತಿಯಿಲ್ಲದೇ ಕುಡಿಯುವ ನೀರು, ಬೀದಿ ದೀಪ, ರಸ್ತೆ ಚರಂಡಿ, ಶೌಚಾಲಯ ಇತ್ಯಾದಿ ಮೂಲಭೂತ ಸೌಕರ್ಯಗಳಿಲ್ಲದೇ ಸದರಿ ಪ್ರದೇಶವು ಮಾಲಿನ್ಯ ಹಾಗೂ ಅನಾರೋಗ್ಯ ವಾತಾವರಣದಿಂದ ಕೂಡಿರುವುದರಿಂದ ಈ ಕೆಳಕಂಡ ಷೆಡ್ಯೂಲ್ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳು (ಅಭಿವೃದ್ಧಿ ಮತ್ತು ನಿರ್ಮೂಲನ) ಕಾಯಿದೆ 1973ರ ಕಲಂ 3ರ ಪ್ರಕಾರ ಕೊಳಚೆ ಪ್ರದೇಶವೆಂದು ಘೋಷಿಸಲು ಪ್ರಾಥಮಿಕ ಅಧಿಸೂಚನೆಯನ್ನು ಅಧಿಸೂಚನೆ ನಂ. ಜಿನಕೋ ಎಸ್‌ಎಲ್‌ಎಂ:ಸಿಆರ್-7/2005-06, ದಿನಾಂಕ: 02.07.2005 ರಂತೆ ಕರ್ನಾಟಕ ರಾಜ್ಯಪತ್ರದ ಭಾಗ-6 ರಲ್ಲಿ ದಿನಾಂಕ: 21.07.2005 ರಲ್ಲಿ ಪುಟಸಂಖ್ಯೆ 448 ರಂತೆ ಪ್ರಕಟಿಸಲಾಗಿದೆ. ಈ ವಿಚಾರದಲ್ಲಿ ಯಾವುದೇ ತಕರಾರು ಬಂದಿಲ್ಲವೆಂದು ವರದಿಯಾಗಿದೆ. ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿ, ಬೆಂಗಳೂರುರವರು ದಿನಾಂಕ: 24.06.2005 ರಲ್ಲಿ ಸಲ್ಲಿಸಿರುವ ಪ್ರಸ್ತಾವನೆಯನ್ನು ಅಂಗೀಕರಿಸಲಾಗಿದೆ.

ಶಿವಮೊಗ್ಗ ನಗರಸಭೆ ವ್ಯಾಪ್ತಿಯ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶವು ತಗ್ಗಾದ ಜಾಗದಲ್ಲಿದ್ದು, ಈ ಪ್ರದೇಶದಲ್ಲಿ ಇರುವ ವಾಸದ ಮನೆಗಳು ಒತ್ತೊತ್ತಾಗಿದ್ದು, ಜನ ಸಂದಣಿಯಿಂದ ಕೂಡಿದೆ. ಈ ಪ್ರದೇಶದಲ್ಲಿರುವ ಗುಡಿಸಲು/ಶೆಡ್‌ಗಳು ದುರಸ್ತಿಯಿಲ್ಲದೇ ಕುಡಿಯುವ ನೀರು, ಬೀದಿ ದೀಪ, ರಸ್ತೆ ಚರಂಡಿ, ಶೌಚಾಲಯ ಇತ್ಯಾದಿ ಮೂಲಭೂತ ಸೌಕರ್ಯಗಳಿಲ್ಲದೇ ಸದರಿ ಪ್ರದೇಶವು ಮಾಲಿನ್ಯ ಹಾಗೂ ಅನಾರೋಗ್ಯ ವಾತಾವರಣದಿಂದ ಕೂಡಿರುವುದು ದೃಢಪಡುವುದರಿಂದ ಕರ್ನಾಟಕ ಕೊಳಚೆ ಪ್ರದೇಶಗಳು (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯಿದೆ 1973ರ ಕಲಂ 03 ರಂತೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಟಿ.ಕೆ. ಅನಿಲ್‌ಕುಮಾರ್, ಜಿಲ್ಲಾಧಿಕಾರಿ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆಗಿರುವ ನಾನು ಈ ಕೆಳಕಂಡ ಷೆಡ್ಯೂಲ್ ಪ್ರದೇಶವನ್ನು 'ಕೊಳಚೆ ಪ್ರದೇಶ' ಎಂದು ಘೋಷಿಸುತ್ತೇನೆ.

**ಷೆಡ್ಯೂಲ್**

| ಕ್ರಮ ಸಂಖ್ಯೆ | ಪ್ರದೇಶದ ಹೆಸರು ಮತ್ತು ಸದರಿ ಪ್ರದೇಶ ಇರುವ ಸ್ಥಳದ ವಿವರ | ಪ್ರಸ್ತಾವಿತ ಪ್ರದೇಶವು ಇರುವ ಜಾಗದ ಮಾಲೀಕರ ಹೆಸರು | ಪ್ರಸ್ತಾಪಿತ ಪ್ರದೇಶವು ಇರುವ ಜಾಗದ ವಿವರ | | |
|---|---|---|---|---|---|
| | | | ತಾಲ್ಲೂಕು/ಗ್ರಾಮ/ ಸ.ನಂ. | ವಿಸ್ತೀರ್ಣ ಎಕರೆ ಗುಂಟೆ | ಚೆಕ್ಕುಬಂದಿ |
| 1 | ಶಿವಮೊಗ್ಗ ನಗರ ಅಹಮದ್ ಕಾಲೋನಿ 2ನೇ ಹಂತ ವಾರ್ಡ್ ನಂ.8 | ಬಿ.ಎಸ್. ಮಹಮ್ಮದ್ | ಶಿವಮೊಗ್ಗ ತಾಲ್ಲೂಕು, ಮುಳ್ಳುಕೆರೆ ಗ್ರಾಮ ಸ.ನಂ.48/1 | 3.02 | ಪೂರ್ವ: ಹಳ್ಳ ಸ.ನಂ.53,55,60<br>ಪಶ್ಚಿಮ: ಹಳ್ಳ ಮತ್ತು ಹಿಡುವಳಿ ಜಮೀನು ಸ.ನಂ.46,47<br>ಉತ್ತರ: ಖಾಲಿ ನಿವೇಶನಗಳು ಸ.ನಂ. 43,44,49<br>ದಕ್ಷಿಣ: ರೈಲ್ವೇ ಲೈನ್ (ತಾಳಗುಪ್ಪ-ಬೆಂಗಳೂರು) ಸ.ನಂ.59,71. |

**ಟಿ.ಕೆ. ಅನಿಲ್ ಕುಮಾರ್**
ಜಿಲ್ಲಾಧಿಕಾರಿ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

ಪಿ.ಆರ್. 595

## ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ನ್ಯಾಯಾಲಯ, ಭದ್ರಾವತಿ ವಿಭಾಗ, ಭದ್ರಾವತಿ

**ಸಂಖ್ಯೆ: ಬಿ3-ಸಿಒಎನ್-ಸಿಆರ್ 6/2005-06, ದಿನಾಂಕ: 7ನೇ ಮಾರ್ಚ್ 2006**

ಭದ್ರಾವತಿ ವಿಭಾಗದ ವ್ಯಾಪ್ತಿಯಲ್ಲಿ ಶ್ರೀಗಂಧದ ಹಾಗೂ ಇತರೆ ಅರಣ್ಯ ಉತ್ಪನ್ನಗಳ ಕಳ್ಳಸಾಗಾಣಿಕೆಯಲ್ಲಿ ತೊಡಗಿದ್ದ ವಾಹನಗಳನ್ನು ಅರಣ್ಯ ಸಿಬ್ಬಂದಿಯವರು ಸರ್ಕಾರದ ಪರ ಅಮಾನತ್ತುಪಡಿಸಿಕೊಂಡು ಸದರಿ ವಾಹನವನ್ನು ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71(ಎ)ರ ಪ್ರಕಾರ ಕ್ರಮ ಜರುಗಿಸುವಂತೆ ಈ ನ್ಯಾಯಾಲಯಕ್ಕೆ ಹಾಜರುಪಡಿಸಲಾದ ವಾಹನಗಳ ತಪಶೀಲು ಈ ಕೆಳಕಂಡಂತಿರುತ್ತದೆ.

| ಕ್ರ. ಸಂ. | ವಾಹನಗಳ ವಿವರ | ಮೊಕದ್ದಮೆ ಸಂಖ್ಯೆ | ಯಂತ್ರದ ಸಂಖ್ಯೆ | ಛಾಸೀಸ್ ಸಂಖ್ಯೆ |
|---|---|---|---|---|
| 1 | ಆಟೋ ನಂ. ಕೆಎ 18 7484 | ಉಂಬ್ಳೆಬೈಲು ವಲಯದ ಅರಣ್ಯ ಮೊಕದ್ದಮೆ ಸಂಖ್ಯೆ: 729/05-06, ದಿನಾಂಕ: 14.1.2006 | ಎಎಲ್ಎಂಬಿಎಲ್ಹೆಚ್ 16978 | ಎಎಲ್ಎಂಬಿಎಲ್ಹೆಚ್ 16812 |

ಈ ಮೇಲ್ಕಂಡ ವಾಹನದ ಬಗ್ಗೆ ಯಾರೂ ವಾರಸುದಾರರು ಇಲ್ಲಿಯವರೆಗೂ ಹಾಜರಾಗದೇ ಇರುವುದರಿಂದ ಸದರಿ ವಾಹನದ ನಿಜವಾದ ವಾರಸುದಾರರು ಯಾರಾದರೂ ಇದ್ದಲ್ಲಿ ಅವರು ವಾಹನಗಳ ಬಗ್ಗೆ ಅಧಿಕೃತ ಹಕ್ಕು ಬಾಧ್ಯತೆಗಳನ್ನು ಕೆಳಸಹಿ ಮಾಡಿರುವವರ ಸಮ್ಮುಖದಲ್ಲಿ ಈ ಅಧಿಸೂಚನೆಯ ಕರ್ನಾಟಕ ಸರ್ಕಾರದ ಗೆಜೆಟ್‌ನಲ್ಲಿ ಪ್ರಕಟವಾದ ದಿನಾಂಕದಿಂದ ಮೂವತ್ತು (30) ದಿನಗಳ ಒಳಗೆ ಹಾಜರುಪಡಿಸಬೇಕಾಗಿ ಮತ್ತು ವಾಹನವನ್ನು ಶ್ರೀಗಂಧ ಮತ್ತು ಇತರೆ ಉತ್ಪನ್ನವನ್ನು ಕಳ್ಳ ಸಾಗಾಣಿಕೆ ಮಾಡಲು ಉಪಯೋಗಿಸಿದಕ್ಕಾಗಿ ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದರ ಬಗ್ಗೆ ಅವರುಗಳು ಅಧಿಕೃತ ಸಮಜಾಯಿಷಿಯನ್ನು ಬರಹದ ಮೂಲಕ ಇತರೆ ದಾಖಲಾತಿಗಳೊಂದಿಗೆ ಈ ಕೆಳಸಹಿದಾರರ ಸಮ್ಮುಖದಲ್ಲಿ ಹಾಜರುಪಡಿಸಲು ಈ ಮೂಲಕ ಪ್ರಕಟಿಸಲಾಗಿದೆ. ಈ ಮೇಲ್ಕಂಡ ವಾಹನದ ಬಗ್ಗೆ ಯಾವ ವಾರಸುದಾರರು ಮೇಲ್ಕಾಣಿಸಿದ ಅವಧಿಯೊಳಗೆ ಲಿಖಿತ ಮೂಲಕ ಯಾವುದೇ ಅರ್ಜಿಯನ್ನು ಈ ಕೆಳಸಹಿದಾರರಿಗೆ ಸಲ್ಲಿಸದೇ ಇದ್ದಲ್ಲಿ ವಾಹನವನ್ನು ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71(ಎ) ಎರಡನೇ ತಿದ್ದುಪಡಿ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ಭದ್ರಾವತಿ ವಿಭಾಗ, ಭದ್ರಾವತಿ.

ಪಿ.ಆರ್. 600

## ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡವಳಿಗಳು

**ವಿಷಯ :** ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ಆಲೂರು ಗ್ರಾಮದಲ್ಲಿ ಮಲ್ಟಿ ಕಲರ್ ಗ್ರಾನೈಟ್‌ಗಾಗಿ ಮೆ: ಸಹನಾ ಇಂಟರ್ ನ್ಯಾಷನಲ್ ರವರಿಗೆ ಮಂಜೂರಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 590ರ ಗುತ್ತಿಗೆಯನ್ನು ಲ್ಯಾಪ್ಸ್‌ಡ್ ಲೀಸ್ ಎಂದು ಪರಿಗಣಿಸುವ ಬಗ್ಗೆ.

**ಉಲ್ಲೇಖ :**
1) ಕೇಂದ್ರ ಕಛೇರಿ ಪತ್ರ ಸಂಖ್ಯೆ: ಗಭೂಇ:ಡಿಸಿಬಿ:ಕಗಗು:590:2005-06:1851-53, ದಿನಾಂಕ: 25.6.2005.
2) ಉಪ ನಿರ್ದೇಶಕರು, ಕನಕಪುರ ರವರ ಪತ್ರ ಸಂಖ್ಯೆ: ಗಭೂಇ:ಉನಿಕ:ಡಿಸಿಬಿ:ಕಗಗು:590:2005-06:2472, ದಿನಾಂಕ: 28.5.2005.

**ಪ್ರಸ್ತಾವನೆ:**

ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ಆಲೂರು ಗ್ರಾಮದ ಸರ್ವೆ ನಂ.6 ರಲ್ಲಿ ಮೆ: ಸಹನಾ ಇಂಟರ್ ನ್ಯಾಷನಲ್ ರವರಿಗೆ 3-20 ಎಕರೆಗೆ ದಿನಾಂಕ: 31.05.2003 ರಿಂದ 10 ವರ್ಷಗಳಿಗಾಗಿ ಕಲ್ಲು ಗಣಿ ಗುತ್ತಿಗೆ ಮಂಜೂರು ಮಾಡಲಾಗಿತ್ತು. ಉಲ್ಲೇಖಿತ ಪತ್ರಗಳಂತೆ ಗುತ್ತಿಗೆದಾರರಿಗೆ ನಿಯಮಾನುಸಾರ ಸೂಚನಾ ಪತ್ರ ನೀಡಿ, 2004ರ ಮಾರ್ಚ್ ಅಂತ್ಯದವರೆಗೆ ಬಾಕಿ ರೂ.1,36,729/- ಗಳನ್ನು ಪಾವತಿಸಿ ಗುತ್ತಿಗೆ ನಿಷ್ಕ್ರಿಯಗೊಳಿಸಿರುವ ಬಗ್ಗೆ ತಿಳಿಸಲಾಗಿತ್ತು.

ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಮೇಲಿನ ಉಲ್ಲೇಖಿತ ಪತ್ರ 1ರ ಅಂತಿಮ ನೋಟೀಸಿಗೆ ಯಾವ ರೀತಿಯೂ ಸ್ಪಂದಿಸಿರುವುದಿಲ್ಲವಾದ ಕಾರಣ ಹಾಗೂ ಉಲ್ಲೇಖಿತ ಪತ್ರದ 2 ರಲ್ಲಿ ತಿಳಿಸಿದಂತೆ ಗುತ್ತಿಗೆಯನ್ನು ನಿಷ್ಕ್ರಿಯವಾಗಿಟ್ಟಿರುವುದರಿಂದ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 39 ರಂತೆ ಸರ್ಕಾರದ ಅಧಿಸೂಚನೆ-III ಸಂಖ್ಯೆ: ಸಿಐ 418 ಎಂಆರ್‌ಸಿ 92, ದಿನಾಂಕ: 2.7.94 ರಲ್ಲಿ ಪ್ರತ್ಯೋಜಿಸಿರುವ ಅಧಿಕಾರದಂತೆ ಗುತ್ತಿಗೆಯನ್ನು ಲ್ಯಾಪ್ಸ್‌ಡ್ ಲೀಸ್ ಎಂದು ಪರಿಗಣಿಸಲಾಗಿದೆ.

**ಆದೇಶ ಸಂಖ್ಯೆ: ಗಭೂಇ:ಡಿ.ಸಿ.ಬಿ:ಕಗಗು 590:2005-06/15061, ದಿನಾಂಕ: 10ನೇ ಮಾರ್ಚ್ 2006**

ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 39 ರಂತೆ ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ಆಲೂರು ಗ್ರಾಮದ ಸರ್ವೆ ನಂ.6 ರಲ್ಲಿ 3-20 ಎಕರೆಗೆ ಮಲ್ಟಿ ಕಲರ್ ಗ್ರಾನೈಟ್‌ಗಾಗಿ ನೀಡಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 590ನ್ನು ತಕ್ಷಣದಿಂದ ಜಾರಿಗೆ ಬರುವಂತೆ ಗುತ್ತಿಗೆಯನ್ನು ಲ್ಯಾಪ್ಸ್‌ಡ್ ಲೀಸ್ ಎಂದು ಪರಿಗಣಿಸಲಾಗಿದೆ.

ನಿರ್ದೇಶಕರು.
ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು

ಪಿ.ಆರ್. 602

## ತಹಶೀಲ್ದಾರ್‌ರವರ ಕಾರ್ಯಾಲಯ, ಬೆಂಗಳೂರು ಪೂರ್ವ ತಾಲ್ಲೂಕು, ಕೆ.ಆರ್.ಪುರ

**ಸಾರ್ವಜನಿಕ ಪ್ರಕಟಣೆ ಸಂಖ್ಯೆ: ಎಲ್ಎನ್‌ಡಿ:ಆರ್‌ಯುಸಿ:221:2005-06, ದಿನಾಂಕ: 1ನೇ ಮಾರ್ಚ್ 2006**

**ನಮೂನೆ-27**

**94ನೇ ನಿಯಮದ 68(1)ನೇ ಪ್ರಕರಣದ ಮೇರೆಗಿನ ಘೋಷಣೆ**

ಸರ್ಕಾರದ ಸ್ವತ್ತಾಗಿರುವ ಹಾಗೂ ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಸಾರ್ವಜನಿಕ ಸರ್ಕಾರಿ ಗುಂಡು ತೋಪು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂದು ರಾಜ್ಯಸರ್ಕಾರಕ್ಕೆ ಕಂಡುಬಂದಿರುವುದರಿಂದ,

ಈಗ ಕರ್ನಾಟಕ ಭೂ ಕಂದಾಯ ಅಧಿನಿಯಮದ 1964ರ 68ನೇ ಪ್ರಕರಣದ (1)ನೇ ಉಪ ಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಸಾರ್ವಜನಿಕ ಗುಂಡು ತೋಪು ಸದರಿ ಭಾಗವು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂದು ಮತ್ತು

ಸಾರ್ವಜನಿಕ ಸ.ಗು.ತೋಪು ಭಾಗದಲ್ಲಿ ಅಥವಾ ಅದರ ಮೇಲೆ ಸಾರ್ವಜನಿಕರ ಹಾಗೂ ಎಲ್ಲಾ ವ್ಯಕ್ತಿಗಳ ಹಕ್ಕುಗಳು ಕೊನೆಗೊಳ್ಳತಕ್ಕದ್ದೆಂದು ಉದ್ದೇಶಿಸಿ ಈ ಮೂಲಕ ಘೋಷಿಸುತ್ತದೆ.

2. ಸಾರ್ವಜನಿಕ ಸ.ಗುಂ.ತೋಪು ಹಕ್ಕಿನ ಜೊತೆಗೆ ಸದರಿ ಗುಂಡು ತೋಪು ಸದರಿ ಭಾಗದಲ್ಲಿ ಅಥವಾ ಅದರ ಮೇಲೆ ಹಿತಾಸಕ್ತಿಯುಳ್ಳ ಅಥವಾ ಹಕ್ಕುಳ್ಳ ಅಥವಾ ಈ ಉದ್ದೇಶದಿಂದ ಪ್ರತಿಕೂಲ ಪರಿಣಾಮಕ್ಕೊಳಗಾಗುವ ಸಂಭವವಿರುವ ಇತರ ಯಾವುದೇ ಹಿತಾಸಕ್ತಿಯನ್ನು ಹೊಂದಿರುವ ಯಾವನೇ ಸಾರ್ವಜನಿಕನು ಅಥವಾ ಯಾವನೇ ವ್ಯಕ್ತಿಯು, ಈ ಅಧಿಸೂಚನೆಯನ್ನು ಹೊರಡಿಸಿದ ತೊಂಬತ್ತು (90) ದಿನದೊಳಗೆ ಸದರಿ ಉದ್ದೇಶದ ಬಗ್ಗೆ ತನ್ನ ಆಕ್ಷೇಪಣೆಗಳನ್ನು, ಅಂಥ ಹಿತಾಸಕ್ತಿಯ ಅಥವಾ ಹಕ್ಕಿನ ಸ್ವರೂಪವನ್ನು ಮತ್ತು ಪ್ರತಿಕೂಲ ಪರಿಣಾಮವು ಸಂಭವಿಸಿರಬಹುದಾದ ರೀತಿಯನ್ನು ಮತ್ತು ಅಂತಹ ಹಿತಾಸಕ್ತಿ ಅಥವಾ ಹಕ್ಕಿನ ಬಗ್ಗೆ ನಷ್ಟ ಪರಿಹಾರಕ್ಕಾಗಿ ಕ್ಲೈಮ್ ಮಾಡಲಾದ ಮೊಬಲಗು ಮತ್ತು ವಿವರಗಳನ್ನು ಜಿಲ್ಲೆಯ ಡೆಪ್ಯೂಟಿ ಕಮೀಷನರಿಗೆ ಬರಹದಲ್ಲಿ ತಿಳಿಸತಕ್ಕದ್ದು. ಮತ್ತು ಸದರಿ ಆಕ್ಷೇಪಣೆಗಳನ್ನು ಮತ್ತು ಕ್ಲೈಮ್‌ಗಳನ್ನು ಸದರಿ ಪ್ರಕರಣದಲ್ಲಿ ಉಪಬಂಧಿಸಿರುವಂತೆ ಡೆಪ್ಯೂಟಿ ಕಮೀಷನರು ಪರಿಶೀಲಿಸತಕ್ಕದ್ದು.

**ಅನುಸೂಚಿ**

| | |
|---|---|
| ಗ್ರಾಮಗಳು. ಭಾಗ ಇತ್ಯಾದಿ ಇರುವ | ಭೋಗನಹಳ್ಳಿ |
| ತಾಲ್ಲೂಕು | ಬೆಂಗಳೂರು ಪೂರ್ವ |
| ಜಿಲ್ಲೆ | ಬೆಂಗಳೂರು ನಗರ |
| ರಸ್ತೆಯ ಮೊದಲಾದುದರ ಭಾಗ ಅಥವಾ ಭಾಗಗಳ ವರ್ಣನೆ | ಸ.ನಂ.18ರ ಗುಂಡು ತೋಪು ಜಮೀನಿನ ಬಾಬ್ತು |
| ರಸ್ತೆಯ ಭಾಗ ಅಥವಾ ಭಾಗಗಳ ಸರಿ ಸುಮಾರು ವಿಸ್ತೀರ್ಣ | 0-24 ಎ.ಗು.ಪೈಕಿ ವಿವಿಧ ಫಲಾನುಭವಿಗಳು ಅನಧಿಕೃತ ಕಟ್ಟಡ ನಿರ್ಮಿಸಿರುವ ಬಗ್ಗೆ. |
| ಮೇರೆ | ಪೂರ್ವ: ಸ.ನಂ.19 (ಸಿಆರ್.ಕೆಂಪರಾಜು),<br>ಪಶ್ಚಿಮ: ರಸ್ತೆ<br>ಉತ್ತರ: ಸ.ನಂ.17 (ಚೌಡಪ್ಪ ಮತ್ತು ವೆಂಕಟೇಶಪ್ಪ)<br>ದಕ್ಷಿಣ: ಸ.ನಂ.19 (ಸಿ.ಆರ್. ಕೆಂಪರಾಜು ಬಿನ್ ರಾಮಸ್ವಾಮಿ) |
| ಸಾರ್ವಜನಿಕ ರಸ್ತೆ : ಬೀದಿ : ಗಲ್ಲಿ: ದಾರಿ ಅಥವಾ ಅದರ ಭಾಗ | ಮೇಲ್ಕಂಡಂತೆ |

ತಹಶೀಲ್ದಾರ್,

ಪಿ.ಆರ್. 603 ಬೆಂಗಳೂರು ಪೂರ್ವ ತಾಲ್ಲೂಕು, ಕೃಷ್ಣರಾಜಪುರ.

**ತಹಶೀಲ್ದಾರ್‌ರವರ ಕಾರ್ಯಾಲಯ, ಬೆಂಗಳೂರು ಪೂರ್ವ ತಾಲ್ಲೂಕು, ಕೆ.ಆರ್.ಪುರ**

**ಸಾರ್ವಜನಿಕ ಪ್ರಕಟಣೆ ಸಂಖ್ಯೆ: ಎಲ್‌ಎನ್‌ಡಿ:ಆರ್‌ಯುಸಿ:924:2005-06, ದಿನಾಂಕ: 1ನೇ ಮಾರ್ಚ್ 2006**

**ನಮೂನೆ-27**

**94ನೇ ನಿಯಮದ 68(1)ನೇ ಪ್ರಕರಣದ ಮೇರೆಗಿನ ಘೋಷಣೆ**

ಸರ್ಕಾರದ ಸ್ವತ್ತಾಗಿರುವ ಹಾಗೂ ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಸಾರ್ವಜನಿಕ ಸರ್ಕಾರಿ ಗುಂಡು ತೋಪು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂದು ರಾಜ್ಯಸರ್ಕಾರಕ್ಕೆ ಕಂಡುಬಂದಿರುವುದರಿಂದ,

ಈಗ ಕರ್ನಾಟಕ ಭೂ ಕಂದಾಯ ಅಧಿನಿಯಮದ 1964ರ 68ನೇ ಪ್ರಕರಣದ (1)ನೇ ಉಪ ಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಸಾರ್ವಜನಿಕ ಗುಂಡು ತೋಪು ಸದರಿ ಭಾಗವು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂದು ಮತ್ತು ಸಾರ್ವಜನಿಕ ಸ.ಗು.ತೋಪು ಭಾಗದಲ್ಲಿ ಅಥವಾ ಅದರ ಮೇಲೆ ಸಾರ್ವಜನಿಕರ ಹಾಗೂ ಎಲ್ಲಾ ವ್ಯಕ್ತಿಗಳ ಹಕ್ಕುಗಳು ಕೊನೆಗೊಳ್ಳತಕ್ಕದ್ದೆಂದು ಉದ್ದೇಶಿಸಿ ಈ ಮೂಲಕ ಘೋಷಿಸುತ್ತದೆ.

2. ಸಾರ್ವಜನಿಕ ಸ.ಗುಂ.ತೋಪು ಹಕ್ಕಿನ ಜೊತೆಗೆ ಸದರಿ ಗುಂಡು ತೋಪು ಸದರಿ ಭಾಗದಲ್ಲಿ ಅಥವಾ ಅದರ ಮೇಲೆ ಹಿತಾಸಕ್ತಿಯುಳ್ಳ ಅಥವಾ ಹಕ್ಕುಳ್ಳ ಅಥವಾ ಈ ಉದ್ದೇಶದಿಂದ ಪ್ರತಿಕೂಲ ಪರಿಣಾಮಕ್ಕೊಳಗಾಗುವ ಸಂಭವವಿರುವ ಇತರ ಯಾವುದೇ ಹಿತಾಸಕ್ತಿಯನ್ನು ಹೊಂದಿರುವ ಯಾವನೇ ಸಾರ್ವಜನಿಕನು ಅಥವಾ ಯಾವನೇ ವ್ಯಕ್ತಿಯು, ಈ ಅಧಿಸೂಚನೆಯನ್ನು ಹೊರಡಿಸಿದ ತೊಂಬತ್ತು (90) ದಿನದೊಳಗೆ ಸದರಿ ಉದ್ದೇಶದ ಬಗ್ಗೆ ತನ್ನ ಆಕ್ಷೇಪಣೆಗಳನ್ನು, ಅಂಥ ಹಿತಾಸಕ್ತಿಯ ಅಥವಾ ಹಕ್ಕಿನ ಸ್ವರೂಪವನ್ನು ಮತ್ತು ಪ್ರತಿಕೂಲ ಪರಿಣಾಮವು ಸಂಭವಿಸಿರಬಹುದಾದ ರೀತಿಯನ್ನು ಮತ್ತು ಅಂತಹ ಹಿತಾಸಕ್ತಿ ಅಥವಾ ಹಕ್ಕಿನ ಬಗ್ಗೆ ನಷ್ಟ ಪರಿಹಾರಕ್ಕಾಗಿ ಕ್ಲೈಮ್ ಮಾಡಲಾದ ಮೊಬಲಗು ಮತ್ತು ವಿವರಗಳನ್ನು ಜಿಲ್ಲೆಯ ಡೆಪ್ಯೂಟಿ ಕಮೀಷನರಿಗೆ ಬರಹದಲ್ಲಿ ತಿಳಿಸತಕ್ಕದ್ದು. ಮತ್ತು ಸದರಿ ಆಕ್ಷೇಪಣೆಗಳನ್ನು ಮತ್ತು ಕ್ಲೈಮ್‌ಗಳನ್ನು ಸದರಿ ಪ್ರಕರಣದಲ್ಲಿ ಉಪಬಂಧಿಸಿರುವಂತೆ ಡೆಪ್ಯೂಟಿ ಕಮೀಷನರು ಪರಿಶೀಲಿಸತಕ್ಕದ್ದು.

**ಅನುಸೂಚಿ**

| | |
|---|---|
| ಗ್ರಾಮಗಳು. ಭಾಗ ಇತ್ಯಾದಿ ಇರುವ | ಗೆದ್ದಲಹಳ್ಳಿ |
| ತಾಲ್ಲೂಕು | ಬೆಂಗಳೂರು ಪೂರ್ವ |
| ಜಿಲ್ಲೆ | ಬೆಂಗಳೂರು ನಗರ |
| ರಸ್ತೆಯ ಮೊದಲಾದುದರ ಭಾಗ ಅಥವಾ ಭಾಗಗಳ ವರ್ಣನೆ | ಸ.ನಂ.7ರ ಗುಂಡು ತೋಪು ಜಮೀನಿನ ಬಾಬ್ತು |
| ರಸ್ತೆಯ ಭಾಗ ಅಥವಾ ಭಾಗಗಳ ಸರಿ ಸುಮಾರು ವಿಸ್ತೀರ್ಣ | 1-23 ಎ.ಗು.ಪೈಕಿ ವಿವಿಧ ಫಲಾನುಭವಿಗಳು ಅನಧಿಕೃತ ಕಟ್ಟಡ ನಿರ್ಮಿಸಿರುವ ಬಗ್ಗೆ. |

| | |
|---|---|
| ಮೇರೆ | ಪೂರ್ವ: ನಾರಾಯಣಮ್ಮನ ಸ್ವತ್ತು<br>ಪಶ್ಚಿಮ: ಸತ್ತರ್‌ಬಾಯಿ ಮತ್ತು ರೈಲ್ವೆ ರಸ್ತೆ<br>ಉತ್ತರ: ರಸ್ತೆ<br>ದಕ್ಷಿಣ: ಆಶಾಲಯರವರ ಸ್ವತ್ತು |
| ಸಾರ್ವಜನಿಕ ರಸ್ತೆ : ಬೀದಿ : ಗಲ್ಲಿ: ದಾರಿ ಅಥವಾ ಅದರ ಭಾಗ | ಮೇಲ್ಕಂಡಂತೆ |

ತಹಶೀಲ್ದಾರ್,
ಬೆಂಗಳೂರು ಪೂರ್ವ ತಾಲ್ಲೂಕು, ಕೃಷ್ಣರಾಜಪುರ.

ಪಿ.ಆರ್. 604

## ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ ಮತ್ತು ಕಾರ್ಮಿಕ ಅಧಿಕಾರಿ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ

**ಪ್ರಕರಣ ಸಂಖ್ಯೆ: ಕಾಪಕ:ಸಿಆರ್-12:2006, ದಿನಾಂಕ: 6ನೇ ಮಾರ್ಚ್ 2006**

**ಅರ್ಜಿದಾರರು:**

1) ಶ್ರೀಮತಿ ಶಾರದಮ್ಮ ಕೋಂ ದಿ: ಟಿ.ಎಂ. ರಾಮು ಅಲಿಯಾಸ್ ರಾಮಣ್ಣ,
2) ಸತೀಶ್ ಬಿನ್ ದಿ: ಟಿ.ಎಂ. ರಾಮು ಅಲಿಯಾಸ್ ರಾಮಣ್ಣ,
3) ಶಶಿಕಲಾ ಬಿನ್ ದಿ: ಟಿ.ಎಂ. ರಾಮು ಅಲಿಯಾಸ್ ರಾಮಣ್ಣ,
3) ಚೈತ್ರ ಬಿನ್ ದಿ: ಟಿ.ಎಂ. ರಾಮು ಅಲಿಯಾಸ್ ರಾಮಣ್ಣ, ಎಲ್ಲರ ವಾಸ: 2ನೇ ತಿರುವು, ಕುಂಬಾರಬೀದಿ, ಜಿ.ಎಸ್. ಮಣಿ, ಟೈಲರ್ ಅಂಗಡಿ ಹತ್ತಿರ, ಶಿವಮೊಗ್ಗ.

**ವಿರುದ್ಧ**

**ಪ್ರತಿವಾದಿಗಳು:**

1) ಕೆ. ರವೀಂದ್ರ ಬಿನ್ ಪಿ. ಶಂಕರ್‌ನಾರಾಯಣ್ ಶ್ರೀ ರವೀಂದ್ರ ಟ್ರಾನ್ಸ್‌ಪೋರ್ಟ್, ಸಾವಕರ್‌ನಗರ, ಶಿವಮೊಗ್ಗ. (ಎಸ್‌ಕೆಟಿ ಲಾರಿ ನಂ.ಕೆಎ-14:3045ರ ಮಾಲೀಕರು)
2) ದಿ ನ್ಯೂ ಇಂಡಿಯಾ ಅಶೂರೆನ್ಸ್ ಕಂ. ಲಿ., 2ನೇ ಮಹಡಿ, ರಾಂಚವಾನ ಕಾಂಪ್ಲೆಕ್ಸ್, ಕೋಡಿಯಾಲ್ ಬೈಲ್, ಮಂಗಳೂರು.

**ಪ್ರಕಟಣೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ದಿ: ಟಿ.ಎಂ. ರಾಮು ಅಲಿಯಾಸ್ ರಾಮಣ್ಣ ರವರು ಪ್ರತಿವಾದಿಯವರಲ್ಲಿ ಚಾಲಕ ಆಗಿ ಕೆಲಸದ ಮೇಲೆ ಇದ್ದಾಗ 27.12.2005 ರಂದು ಅಪಘಾತಗೊಂಡಿರುವುದರಿಂದ ಮೃತರಾಗಿರುತ್ತಾರೆ.

ಮೃತರು ಪ್ರತಿವಾದಿಯವರ ಕಡೆ ಕೆಲಸದಲ್ಲಿರುವ ಕಾರಣ ಪರಿಹಾರ ಹಣಕ್ಕಾಗಿ ಅರ್ಜಿದಾರರು ದಿನಾಂಕ: 27.2.2006 ರಂದು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಆದುದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆಯು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ತಮ್ಮ ಆಕ್ಷೇಪಣೆಗಳಾಗಲೀ, ಅಥವಾ ಅರ್ಜಿಗಳನ್ನಾಗಲಿ ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿತ ಅವಧಿಯಲ್ಲಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೇ ಇದ್ದರೆ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನು ವಿಚಾರಣೆಗೆ ತೆಗೆದುಕೊಳ್ಳಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

ಪಿ.ಆರ್. 605 ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

## ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪವಿಭಾಗ-2, ಚಿಕ್ಕಮಗಳೂರು

**ಪ್ರಕರಣ ಸಂಖ್ಯೆ: ಕಾಪಕಾ:ಎಫ್-02:2003**

**ಅರ್ಜಿದಾರರು:**

1) ಶ್ರೀ ನಾರಾಯಣ ಶೆಟ್ಟಿ ಬಿನ್ ವೀರಪ್ಪ ಶೆಟ್ಟಿ
2) ಶ್ರೀಮತಿ ಲಲಿತಮ್ಮ ಕೋಂ ನಾರಾಯಣ ಶೆಟ್ಟಿ
3) ಕುಮಾರಿ ಎನ್. ರತ್ನ

**ವಿರುದ್ಧ**

**ಪ್ರತಿವಾದಿಗಳು:**

ಶ್ರೀ ನಾಸಿರ್ ಪಾಷ ಮತ್ತು ಇತರರು

**ಪ್ರಕಟಣೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ 1 ಮತ್ತು 2ನೇ ಅರ್ಜಿದಾರರ ಮಗ ಯೋಗೇಶ್ ರವರು 3 ಪ್ರತಿವಾದಿಯವರ ಸಂಸ್ಥೆಯಲ್ಲಿ ರೈಟರ್ ಆಗಿ ಕೆಲಸ ಮಾಡುತ್ತಿದ್ದಾಗ ದಿನಾಂಕ: 27.09.2002 ರಂದು ಅಪಘಾತವಾಗಿ ಮೃತಪಟ್ಟಿರುತ್ತಾರೆಂದು, ಈ ಸಂಬಂಧವಾಗಿ ಮೃತನ ಅವಲಂಬಿತರು ಎಂದು ಈ ಮೇಲ್ಕಂಡ ಅರ್ಜಿದಾರರು ಪರಿಹಾರಕ್ಕಾಗಿ ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ಸಂಬಂಧ ಈ ಪ್ರಕಟಣೆಯ ಮೂಲಕ ಸಾರ್ವಜನಿಕ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತನ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ ಅಂತಹವರು ಈ ಪ್ರಕಟಣೆಯು ರಾಜ್ಯ ಪತ್ರಿಕೆಯಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು, ತಪ್ಪಿದಲ್ಲಿ ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಆರ್.ಬಿ. ಬಾಗೇವಾಡಿ**

ಪಿ.ಆರ್. 606 ಕಾರ್ಮಿಕ ಪರಿಹಾರ ಆಯುಕ್ತರು, ಉಪವಿಭಾಗ-2, ಚಿಕ್ಕಮಗಳೂರು.

## ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪವಿಭಾಗ-2, ಚಿಕ್ಕಮಗಳೂರು

**ಪ್ರಕರಣ ಸಂಖ್ಯೆ: ಕಾಪಕಾ:ಎಫ್-08:2004**

**ಅರ್ಜಿದಾರರು:**

1) ಶ್ರೀಮತಿ ಶಾರದ ಕೋಂ ಲೇಟ್ ತಿಮ್ಮಪ್ಪ
2) ಶ್ರೀ ಹರೀಶ್ ಬಿನ್ ಲೇಟ್ ತಿಮ್ಮಪ್ಪ
3) ಕು: ಸವಿತಾ ತಂದೆ; ಲೇಟ್ ತಿಮ್ಮಪ್ಪ
4) ಕು: ಕವಿತಾ ತಂದೆ; ಲೇಟ್ ತಿಮ್ಮಪ್ಪ ತಳಗೂರು ಗ್ರಾಮ, ಮೂಡಿಗೆರೆ ತಾಲ್ಲೂಕು.

**ವಿರುದ್ಧ**

**ಪ್ರತಿವಾದಿಗಳು:**

1) ಕಿಮ್ಮನ್ ಪ್ಲಾಂಟೇಷನ್ಸ್, ಬೆಳ್ಳೂರು ಅಂಚೆ, ಮೂಡಿಗೆರೆ ತಾಲ್ಲೂಕು.
2) ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂಪನಿ ಲಿಮಿಟೆಡ್, ಚಿಕ್ಕಮಗಳೂರು.

**ಪ್ರಕಟಣೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ಅರ್ಜಿದಾರರ ಗಂಡ ತಿಮ್ಮಪ್ಪ ರವರು ಪ್ರತಿವಾದಿಯವರ ಟ್ರಾಕ್ಟರ್‌ನಲ್ಲಿ ಚಾಲಕ ಆಗಿ ಕೆಲಸ ಮಾಡುತ್ತಿದ್ದಾಗ ದಿನಾಂಕ: 6.3.2004 ರಂದು ಅಪಘಾತವಾಗಿ ಮೃತಪಟ್ಟಿರುತ್ತಾರೆಂದು, ಈ ಸಂಬಂಧವಾಗಿ ಮೃತನ ಅವಲಂಬಿತರು ಎಂದು ಈ ಮೇಲ್ಕಂಡ ಅರ್ಜಿದಾರರು ಪರಿಹಾರಕ್ಕಾಗಿ ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ಸಂಬಂಧ ಈ ಪ್ರಕಟಣೆಯ ಮೂಲಕ ಸಾರ್ವಜನಿಕ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತನ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ ಅಂತಹವರು ಈ ಪ್ರಕಟಣೆಯು ರಾಜ್ಯ ಪತ್ರಿಕೆಯಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು, ತಪ್ಪಿದಲ್ಲಿ ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಆರ್.ಬಿ. ಬಾಗೇವಾಡಿ**

ಪಿ.ಆರ್. 607 ಕಾರ್ಮಿಕ ಪರಿಹಾರ ಆಯುಕ್ತರು, ಉಪವಿಭಾಗ-2, ಚಿಕ್ಕಮಗಳೂರು.

**ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ಕಛೇರಿ, ಬೆಂಗಳೂರು ನಗರ ವಿಭಾಗ, ಬೆಂಗಳೂರು 03**

**ಅಧಿಸೂಚನೆ ಸಂಖ್ಯೆ: ಎ3.ಸಿಬ್ಬಂದಿ.ಸಿಆರ್-116/2005-06, ದಿನಾಂಕ: .... ಮಾರ್ಚ್ 2006**

**ವಿಷಯ :** ಶ್ರೀ ಎಂ.ಎಸ್. ಗೋಪಾಲ್, ಅರಣ್ಯ ರಕ್ಷಕ, ಅಲಸೂರು ಘಟಕ ಇವರು ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಿ ಬಗ್ಗೆ.

**ಉಲ್ಲೇಖ :** 1) ವಲಯ ಅರಣ್ಯಾಧಿಕಾರಿ, ಬೆಂಗಳೂರು ವಲಯ ಕಛೇರಿ ಪತ್ರದ ದಿನಾಂಕ: 21.11.2005.
2) ವಲಯ ಅರಣ್ಯಾಧಿಕಾರಿ, ಅಲಸೂರು ಘಟಕ ರವರ ಪತ್ರದ ದಿನಾಂಕ: 02.12.2004.
3) ಈ ಕಛೇರಿಯಿಂದ ನಿಮಗೆ ನೀಡಲಾದ ಕಾರಣ ಕೇಳಿ ನೋಟೀಸ್ ದಿನಾಂಕ: 20.12.2005.

ನೀವು ಈ ವಿಭಾಗದ ವ್ಯಾಪ್ತಿಯಲ್ಲಿ ಬರುವ ಅಲಸೂರು ಘಟಕದಲ್ಲಿ ಅರಣ್ಯ ರಕ್ಷಕರಾಗಿ ಕಾರ್ಯನಿರ್ವಹಿಸುತ್ತಿದ್ದ ನೀವು ದಿನಾಂಕ: 01.04.2005 ರಿಂದ ರಜೆ ಅರ್ಜಿಯನ್ನು ಸಲ್ಲಿಸದೆ, ಯಾವುದೇ ಮಾಹಿತಿಯನ್ನು ನೀಡದೆ ಕರ್ತವ್ಯಕ್ಕೆ ಗೈರುಹಾಜರಾಗಿರುತ್ತೀರೆಂದು ಉಲ್ಲೇಖ (1) ಮತ್ತು (2) ರಲ್ಲಿ ವಲಯ ಅರಣ್ಯಾಧಿಕಾರಿಗಳು ವರದಿ ಮಾಡಿದ್ದರ ಮೇರೆಗೆ ಉಲ್ಲೇಖ (3)ರ ಈ ಕಛೇರಿ ಪತ್ರದಲ್ಲಿ ಕಾರಣ ಕೇಳಿ ನೋಟೀಸ್ ನೀಡಿ, ನೋಟೀಸ್ ಪ್ರತಿಯನ್ನು ನಿಮ್ಮ ಸೇವಾ ವಹಿಯಲ್ಲಿನ ವಿಳಾಸಕ್ಕೆ ಜಾರಿ ಮಾಡುವಂತೆ ವಲಯ ಅರಣ್ಯಾಧಿಕಾರಿ, ಬೆಂಗಳೂರು ವಲಯ ರವರಿಗೆ ನಿರ್ದೇಶನ ನೀಡಲಾಗಿತ್ತು.

ಉಲ್ಲೇಖ (3)ರ ನೋಟೀಸನ್ನು ನಿಮ್ಮ ಸೇವಾ ವಹಿಯಲ್ಲಿನ ಖಾಯಂ ವಿಳಾಸಕ್ಕೆ ನೋಂದಾಯಿತ ಅಂಚೆ ಮೂಲಕ ಕಳುಹಿಸಲಾಗಿ ಸದರಿ ನೋಟೀಸ್‌ಗಳು "Addressee left-Returned to Sendor" ಎಂಬ ಅಂಚೆ ಷರಾದೊಂದಿಗೆ ಹಿಂದಿರುಗಿ ಬಂದಿರುತ್ತದೆ ಎಂದು ವಲಯ ಅರಣ್ಯಾಧಿಕಾರಿ, ಬೆಂಗಳೂರು ರವರು ವರದಿ ಮಾಡಿರುತ್ತಾರೆ.

ನಿಮ್ಮ ಅನಧಿಕೃತ ಗೈರುಹಾಜರಿಯು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗೆ ವಿರುದ್ಧವಾಗಿದ್ದು, ಈ ನೋಟೀಸ್ ದಿನಪತ್ರಿಕೆಯಲ್ಲಿ ಅಥವಾ ರಾಜ್ಯ ಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ ಒಂದು ತಿಂಗಳಲ್ಲಿ ಕರ್ತವ್ಯಕ್ಕೆ ಹಾಜರಾಗುವುದು ಅಥವಾ ಖುದ್ದು ಹಾಜರಾಗಲು ಸಾಧ್ಯವಾಗದಿದ್ದಲ್ಲಿ ನಿಮ್ಮ ಲಿಖಿತ ಹೇಳಿಕೆ ಏನಾದರೂ ಇದ್ದರೆ ಸಲ್ಲಿಸುವುದು. ಈ ನಿಗದಿತ ಅವಧಿಯಲ್ಲಿ ನಿಮ್ಮ ಅಹವಾಲನ್ನು ಸಲ್ಲಿಸದಿದ್ದಲ್ಲಿ ನಿಮಗೆ ನಿಮ್ಮ ಕೆಲಸದಲ್ಲಿ ಆಸಕ್ತಿ ಇಲ್ಲವೆಂಬ ಕರ್ತವ್ಯ ಲೋಪ ಆರೋಪದ ಮೇಲೆ ಕರ್ನಾಟಕ ನಾಗರೀಕ ಸೇವಾ ನಿಯಮ 108ರ ಮೇರೆಗೆ ಕ್ರಮ ಜರುಗಿಸಲಾಗುವುದು ಎಂದು ತಿಳಿಯುವುದು.

ಉಪ ಅರಣ್ಯ ಸಂರಕ್ಷಣಾಧಿಕಾರಿ,

ಪಿ.ಆರ್. 608 ಬೆಂಗಳೂರು ನಗರ ವಿಭಾಗ, ಬೆಂಗಳೂರು.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ-2, ಬಿಜಾಪುರ**

**ಪ್ರಕರಣ ಸಂಖ್ಯೆ: ಕಾಅಬ:ಕಾನಪ:ಮಪ್ರ:ಎಸ್‌ಆರ್-61:2006, ದಿನಾಂಕ: 7ನೇ ಮಾರ್ಚ್ 2006**

**ಅರ್ಜಿದಾರರು:**
1) ಶ್ರೀಮತಿ ಬಸಮ್ಮ ಗಂಡ ಶಾಗಪ್ಪ ಉರುಫ್ ಚೌಗಪ್ಪ
ಸಧ್ಯದ ವಾಸ: ನಿಡಗುಂದಿ, ಜಿಲ್ಲೆ: ಬಿಜಾಪೂರ.
2) ಶಾಗಪ್ಪ ಉರುಫ್ ಚೌಗಪ್ಪ,
ವಾಸ: ನಿಡಗುಂದಿ, ಜಿಲ್ಲೆ: ಬಿಜಾಪೂರ.

**ವಿರುದ್ಧ**

**ಪ್ರತಿವಾದಿಗಳು:**
1) ಶ್ರೀ ಸಣ್ಣ ಈರಣಪ್ಪ ತಂದೆ ಭೀಮನಗೌಡ,
ಮಾಲೀಕರು-ಟ್ರಾಕ್ಟರ್ ಟ್ರೇಲರ್ ಸಂಖ್ಯೆ: ಕೆಎ 34:ಟಿ-1524:1525,
ವಾಸ: ಜಿಟಗಿನಹಾಳ, ಹೆಚ್. ವೀರಾಪೂರ, ಬಳ್ಳಾರಿ.
2) ದಿ ಬ್ರ್ಯಾಂಚ್ ಮ್ಯಾನೇಜರ್,
ಯುನೈಟೆಡ್ ಇಂಡಿಯಾ ಇನ್ಶೂರೆನ್ಸ್ ಕಂ. ಲಿ., ಬಿಜಾಪೂರ.

**ಪ್ರಕಟಣೆ**

ಶ್ರೀಮತಿ ಬಸಮ್ಮ ಗಂಡ ಶಾಗಪ್ಪ ಉರುಫ್ ಚೌಗಪ್ಪ 2) ಶಾಗಪ್ಪ ಉರುಫ್ ಚೌಗಪ್ಪ ಇವರುಗಳಾದ ತಾವು ಮೃತ ಬಸವ ತಂದೆ ಶಾಗಪ್ಪ ಉರುಫ್ ಚೌಗಪ್ಪ ಇವರ ತಂದೆ ಮತ್ತು ತಾಯಿ ಎಂದೂ ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಬಸವ ಇವರು ಒಂದನೇ ಪ್ರತಿವಾದಿಗಳಾದ ಸಣ್ಣ ಈರಣಪ್ಪ ತಂದೆ ಭೀಮನಗೌಡ ಇವರ ಟ್ರಾಕ್ಟರ್ ಟ್ರೇಲರ್ ಸಂಖ್ಯೆ: ಕೆಎ-34:ಟಿ-1524:1525 ರಲ್ಲಿ ಕೂಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನ ಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಜಿ. ಸಿದ್ಧಲಿಂಗಪ್ಪ ಆಲೂರು**

ಪಿ.ಆರ್. 610 ಕಾರ್ಮಿಕ ಪರಿಹಾರ ಆಯುಕ್ತರು, ಉಪ ವಿಭಾಗ-2, ಬಿಜಾಪೂರ ಜಿಲ್ಲೆ, ಬಿಜಾಪೂರ.